# ಸಾಹೇಬ್ರು ಬಂದವೇ!!

## ಅರೆಬಾಸೆ ನಾಟಕ


ಮೂಲಲೇಕಕರ್ : ನಿಕೋಲಾಯ್ ಗೊಗೊಲ್

ಮೂಲಕೃತಿ : ದಿ ಇನ್‌ಸ್ಪೆಕ್ಟರ್ ಜನರಲ್

ಕನ್ನಡಕೆ : ಕೆ.ವಿ. ಸುಬ್ಬಣ್ಣ ಮತ್ತೆ ಕೆ.ವಿ. ಅಕ್ಷರ

ಅರೆಬಾಸೆಗೆ : ಜಯಪ್ರಕಾಶ್ ಕುಕ್ಕೇಟಿ





ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ದಶವರ್ಷ ಸಂಭ್ರಮದ ಪುಸ್ತಕಮಾಲಿಕೆ 2022

# ಸಾಹೇಬ್ರು ಬಂದವೇ

## ಅರೆಬಾಸೆ ನಾಟಕ

ಮೂಲಲೇಕಕರ್ : **ನಿಕೋಲಾಯ್ ಗೊಗೊಲ್**

ಮೂಲಕೃತಿ : **ದಿ ಇನ್ಸ್‌ಪೆಕ್ಟರ್ ಜನರಲ್**

ಕನ್ನಡಕೆ : **ಕೆ.ವಿ. ಸುಬ್ಬಣ್ಣ ಮತ್ತೆ ಕೆ.ವಿ. ಅಕ್ಷರ**

ಅರೆಬಾಸೆಗೆ : **ಜಯಪ್ರಕಾಶ್ ಕುಕ್ಕೇಟಿ**



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಮಡಿಕೇರಿ

Decennial Year Publication Series 2022

**ಸಾಹೇಬ್ರು ಬಂದವೇ –** ಅರೆಬಾಸೆ ನಾಟಕ

**Sahebru Bandave**
Drama in Arebase by
**Jayaprakash Kukketi**
Kukketi House, Peralu Post, Mandekolu Village
Sullia Taluk - 574 239
Mobile: 6363257536

**ಸಲಹಾ ಸಮಿತಿ :**
ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
ಶ್ರೀಮತಿ ಸ್ಮಿತಾ ಅಮೃತರಾಜ್
ಡಾ. ವಿಶ್ವನಾಥ ಬದಿಕಾನ
ಶ್ರೀ ಭರತೇಶ ಅಲಸಂಡೆಮಜಲು

ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪ ಬಿಲ್ಡಿಂಗ್, ರಾಜಸೀಟ್ ರಸ್ತೆ, ಮಡಿಕೇರಿ
ದೂ: 08272–223055, ಮೊ : 6362522677
arebaseacademy@gmail.com, www.arebasheacademy.gov.in

ಪ್ರಕಟಣೆಯ ವರ್ಷ : 2022



ಆಕಾರ : ಕ್ರೌನ್ 1/8 ಕಾಗದ : 80 ಜಿಎಸ್ಎಂ ಮ್ಯಾಪ್ಲಿತೋ

ಪುಟಗಳು : 128 ಬೆಲೆ : ರೂ. 100

ಪ್ರತಿಗಳು : 100
ಅಕ್ಷರವಿನ್ಯಾಸ : **ವಿನೋದ್ ಮೂಡಗದ್ದೆ**
ಮುಖಪುಟ ವಿನ್ಯಾಸ : **ಕಲ್ಲೂರು ನಾಗೇಶ**
ಪುಟವಿನ್ಯಾಸ ಮತ್ತು ಮುದ್ರಣ
**ಆಕೃತಿ ಪ್ರಿಂಟ್ಸ್**
ಲೈಟ್‌ಹೌಸ್ ಹಿಲ್ ರಸ್ತೆ, ಮಂಗಳೂರು – 575 001
ದೂ: 0824 2972002

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಪುಸ್ತಕ ಪ್ರಕಟಣೆ ಯೋಜನೆ ಅಡಿಲಿ ಜಯಪ್ರಕಾಶ್ ಕುಕ್ಕೇಟಿ ಅವು ಅರೆಬಾಸೆಗೆ ಅನುವಾದ ಮಾಡ್ದ ನಾಟಕ 'ಸಾಹೇಬ್ರು ಬಂದವೇ' ಪ್ರೆಂಟಾಗಿ ಬರ್ತಾ ಇರ್ದು ಕುಸಿನ ವಿಸಯ. ರಂಗಬೂಮಿ ಕೆಲ್ಸಗ ಆಕುಂತಾದ್ರೆ ಅರೆಬಾಸೆಲಿ ನಾಟಕ ಪುಸ್ತಕಗ, ಅರೆಬಾಸೆ ಪ್ರದೇಸದ ಸಂಗತಿಗ, ಕತೆನ ಇಸಿಕಂಡ್ ಒಳ್ಳೊಳ್ಳೆ ನಾಟಕ ಮುಂದಿನ ದಿನಲಿ ಬರೋಕು. ಆಗ ಅರೆಬಾಸೆ ರಂಗಬೂಮಿಗೆ ಹೆಚ್ಚ್ ಸಕ್ತಿ ಬಂದದೆ.

ನಮ್ಮ ಅಕಾಡೆಮಿ ವತಿಂದ 2020ರ ಹೊತ್ತ್‌ಲಿ ಅರೆಬಾಸೆ ರಂಗ ತರಬೇತಿ ಶಿಬಿರ ಕಾರ್ಯಕ್ರಮ ಹಮ್ಮಿಕಂಡಿದ್ದೊ. ಆ ದಿನಲಿ ನಾವ್‌ಗೆ ಅರೆಬಾಸೆಲಿ ಒಳ್ಳೆ ನಾಟಕ ಸಿಕ್ಕಿತ್ಲೆ. ಹಂಗಾಗಿ ನಾವ್ ಕನ್ನಡಲಿ ಕೆ.ವಿ. ಸುಬ್ಬಣ್ಣ ಮತ್ತೆ ಕೆ.ಎ. ಅಕ್ಷರ ಬರ್ದಿದ್ದ 'ಸಾಹೇಬರು ಬರುತ್ತಾರೆ' ನಾಟಕನ ಜಯಪ್ರಕಾಶ್ ಕುಕ್ಕೇಟಿ ಅವರೊಟ್ಟ್‌ಗೆ ಅರೆಬಾಸೆಗೆ ಅನುವಾದ ಮಾಡಿಕೊಡಿಕೆ ಕೇಳಿಕಂಡಿದ್ದೊ. ಅವ್ ಅನುವಾದ ಕೆಲ್ಸನ ಪೊರ್ಲುಲಿ ಮಾಡಿಕೊಟ್ಟ್ ನಾಟಕಕ್ಕ್ ಜೀವ ತುಂಬಿದೊ. ಅರೆಬಾಸೆಲಿ ಸಾಹೇಬ್ರು ಬಂದವೇ ನಾಟಕ ನಮ್ಮ ರಾಜ್ಯದ ಹದಿನಾರು ಕಡೆಲಿ ರಂಗಭೂಮಿಲಿ ಹೆಸ್ರ್ ಮಾಡ್ದ ನಿರ್ದೇಶಕ ಜೀವನ್‌ರಾಂ ಸುಳ್ಯ ಅವರ ನಿರ್ದೇಶನಲಿ ಪ್ರದರ್ಸನ ಕಂಡ್ ಅರೆಬಾಸೆ ರಂಗಬೂಮಿಗೆ ಒಂದ್ ಒಳ್ಳೆ ಆರಂಬ ಕೊಟ್ಟತ್. ಈಗ ಸಾಹೇಬ್ರು ಬಂದವೇ ನಾಟಕ ಪುಸ್ತಕ ಆಗಿ ಬರ್ತಾ ಉಟ್ಟು. ಮುಂದಿನ ದಿನಲಿ ಈ ಪುಸ್ತಕ ನಾಟಕ ಮಾಡ್‌ವೊಕ್ಕೆ ಅನುಕೂಲ ಆಗಲಿ. ಹಂಗೆನೆ ಅನುವಾದ ಮಾಡಿಕೊಟ್ಟ ಜಯಪ್ರಕಾಶ್ ಕುಕ್ಕೇಟಿ ಅವ್ಕೆ ಅಬಿನಂದನೆಗ. ಅವರ್‌ಂದ ಅರೆಬಾಸೆಲಿ ಇನ್ನ್ ಹೆಚ್ಚೆಚ್ಚ್ ನಾಟಕ ಬರ್‌ಲಿತ ಹಾರೈಸಿನೆ.

2–7–2022 **ಲಕ್ಷ್ಮೀನಾರಾಯಣ ಕಜೆಗದ್ದೆ**

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಅಧ್ಯಕ್ಷರ್

**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರ್**

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ

ಶ್ರೀಮತಿ ಸ್ಮಿತಾ ಅಮೃತರಾಜ್

ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ

ಶ್ರೀ ಧನಂಜಯ ಅಗೋಳಿಕಜೆ

ಶ್ರೀ ದಂಬೆಕೋಡಿ ಎಸ್. ಆನಂದ

ಡಾ. ಕೂಡಕಂಡಿ ದಯಾನಂದ

ಶ್ರೀ ಕುಸುಮಾಧರ ಎ.ಟಿ.

ಡಾ. ವಿಶ್ವನಾಥ ಬದಿಕಾನ

ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ

ಶ್ರೀ ಪುರುಷೋತ್ತಮ ಕಿರ್ಲಾಯ

ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು

ಶ್ರೀ ಕಿರಣ್ ಕುಂಬಳಚೇರಿ

ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**

# ನಿರ್ದೇಶಕರ ಮಾತ್

ಒಂದ್ ಬಾಸೆನ ಸೀಮಿತ ಗಡಿ ಇಂದ ಹೊರಗೆ ದಾಟಿಸೊಕುತ ಹೇಳ್ರೆ ಅದಕ್ಕೆ ಒಂದ್ ಪ್ರಬಲ ಮಾಧ್ಯಮ ಬೇಕು. ಅದ್ ನಾಟಕಂದ ಮಾತ್ರ ಮಾಡಿಕೆ ಸಾಧ್ಯ. ಅರೆಬಾಸೆ ನಂಗೆ ಬಾಳ ಹತ್ತಿರದ ಬಾಸೆ. ನನ್ನ ಒಡನಾಡಿಗರ್ಲಿ ಹೆಚ್ಚಿನವ್ ಅರೆಬಾಸಿಗರೇ, ಅದೂ ಅಲ್ಲದೆ ನಮ್ಮ ಸುಳ್ಯ ಪ್ರದೇಸಲಿ ಈ ಬಾಸೆ ಜಾತಿನ ಮೀರಿ ಬೆಳ್ದುಟು. ಇಂತಹ ಪೊರ್ಲುನ ಬಾಸೆಲಿ ಒಂದ್ ಸಂಪೂರ್ಣ ನಾಟಕ ಮಾಡ್ಸಕುತ ಬಾಳ ದಿನಂದ ಒಂದ್ ಆಸೆ ಇತ್ತ್. ಆದ್ ಸಾಹೇಬ್ರು ಬಂದವೇ ನಾಟಕದ ಮೂಲಕ ಈಡೇರಿಟು.

ಅಕಾಡೆಮಿ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆಯವು ಬಂದ್ ಹಿಂಗೆ ಒಂದು ನಾಟಕ ಮಾಡ್ಸಕುತ ಕೇಳಿಕನ ಕುಸಿಂದಲೇ ಒಪ್ಪಿಕಂಡೆ. ಕತೆನೂ ಸಿಕ್ಕಿತ್. ಕಲಾವಿದರ ಸೇರ್ಸುದರ್‌ಲಿ ನಾವ್ಗೆ ಹಣ್ಣ್ ಬಜ್ಜ ಆತ್. ಆದರೂ ಅದರ ಒಂದ್ ಸವಾಲ್ ಆಗಿ ತಕಂಡ್ ಹೊರಗೆಂದ ಬಂದವರೊಟ್ಟಿಗೆ ಅರೆಬಾಸೆಲಿ ಮಾತಾಡುವಂಗೆ ಮಾಡಿ ನಾಟಕನ ಮುಂದುವರೆಸಿದೊ. ಇನ್ನೇನ್ ಪ್ರದರ್ಸನ ಕೊಡೊಕು ತೇಳುವ ಹಂತಕೆ ಬಾಕನ ಕೊರೋನ ಕರಿನೆರಳ್ ಬೀತ್. ಕೊರೋನಂದ ನಾವ್ಗೆ ಸುರುನ ಸಲ ಪ್ರದರ್ಶನ ಕೊಡಿಕೆ ಆತ್ಲೆ. ಮುಂದೆ ಹೆಂಗೆ ತೇಳೊ ವಿಚಾರ ತಲೆಲಿ ಇತ್ತ್. 2020 ಡಿಸೆಂಬರ್‌ಲಿ ರಂಗಮನೆಲೇ ಎರಡ್ ಪ್ರದರ್ಶನ ಆತ್. ಕಡೆಗೆ ರಂಗಪಯಣ ಹೊರ್ಟ್ ಬಾಳಷ್ಟ್ ಕಡೆ ಪ್ರದರ್ಶನ ಆತ್. ಹೋದ ಕಡೆ ಎಲ್ಲ ಜನ ಮೆಚ್ಚಿದೊ, ಕುಸಿ ಪಟ್ಟೊ. ನಮ್ಮ ಶ್ರಮಕ್ಕೆ ಪ್ರತಿಪಲ ಸಿಕ್ಕಿದಂಗೆ ಆತ್.

**ಜೀವನ್‌ರಾಂ ಸುಳ್ಯ**

# ಅನುವಾದಕರ ಮಾತ್

ಬಾಸೆತೇಕ್ರೆ ಒಬ್ಬ ಮತ್ತೊಬ್ಬನೊಟ್ಟ್‌ಗೆ ವಿಚಾರಗಳ ಹೇಳಿಕೊಂಬಕೆ ಇರ್‌ವ ಮಾದ್ಯಮ. ಪ್ರಪಂಚಲಿ ಇಂತ ಸಾವಿರಾರ್ ಬಾಸೆಗ ಒಳೊ. ಪ್ರತೀ ಇಪ್ಪತ್ತ್ ಕಿಲೋಮೀಟರ್‌ಗೆ ಬಾಸೆ ಬದಲಾಗ್ತಾ ಹೋದೆಗಡ. ಪ್ರಾದೇಸಿಕತೆ ಹಾಂಗೆ ಜನಾಂಗದ ನೆಲೆಲಿ ಬೆಳ್ದ್ ಬಂದ ಬಾಸೆಗಳಿಗೆ ಅದರ್‌ದೆ ಆದ ವಿಸೇಸ ಉಟ್ಟು. ಅಂತ ಪೊರ್ಲುನ ಬಾಸೆಗಳ್‌ಲಿ ಅರೆಬಾಸೆನೂ ಒಂದ್. ಇದರ ಅರೆಗನ್ನಡಂತ್ಲೂ ಹೇಳ್ವೆ. ಇದೊಂದು ಕನ್ನಡದ ಪ್ರಾದೇಸಿಕ ಬಾಸಾ ಪ್ರಬೇದ. ಹಾಂಗಾಗಿ ಕನ್ನಡ ಗೊತ್ತಿರೊವುಕೆ ಈ ಬಾಸೆ ಅರ್ತ ಆದೆ. ಮತ್ತೆ ಕಲೆಕೆನೂ ತುಂಬ ಸುಲಬ.

ಈ ಬಾಸೆನ ಒಳ್ಸಿ ಬೆಳ್ಸೊಕೂತ ಸುಳ್ಯದವೇ ಆದ ಡಿ.ವಿ. ಸದಾನಂದ ಗೌಡ್ರು ಕರ್ನಾಟಕದ ಮುಖ್ಯಮಂತ್ರಿ ಆಗಿರ್ಕನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ರಚನೆ ಮಾಡ್ದೊ. ಈ ಅಕಾಡೆಮಿನ ಈಗನ ಆಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಬಾಸೆನ ದಾಕಲೀಕರಣ ಮತ್ತೆ ಪ್ರಸಾರಕ್ಕೆ ತುಂಬಾ ಕೆಲ್ಸ ಮಾಡ್ತಾ ಒಳೊ. ಅದರ್‌ಲಿ ಅರೆಬಾಸೆ ನಾಟಕನೂ ಒಂದ್. ಅದೇ ಈ ನಾಟಕ – 'ಸಾಹೇಬ್ರ್ ಬಂದವೇ'.

ರಶ್ಯನ್ ಮೂಲದ ಈ ನಾಟಕನ ಹೆಗ್ಗೋಡ್ನ 'ನೀನಾಸಂ'ನ ನಿರ್ದೇಶಕರ್ ಕೆ.ವಿ. ಸುಬ್ಬಣ್ಣ ಮತ್ತೆ ಕೆ.ವಿ. ಅಕ್ಷರ ಕನ್ನಡಕ್ಕೆ ಅನುವಾದ ಮಾಡ್ಯೊಳೊ. ಅದರ ಅರೆಬಾಸೆಗೆ ಅನುವಾದ ಮಾಡಿಕೆ ಅಕಾಡೆಮಿ ಅಧ್ಯಕ್ಷ ಲಕ್ಷ್ಮೀನಾರಾಯಣ ಕಜೆಗದ್ದೆ

ಮತ್ತೆ ನಾಟಕ ನಿರ್ದೇಶಕ ಜೀವನರಾಮ್ ಸುಳ್ಯ ಅವ್ ನಂಗೆ ಅವಕಾಸ ಕೊಟ್ಟೊ.

ಒಂದ್ ಆಡಳ್ತೆ ವ್ಯವಸ್ತೆಲಿ ಇರ್ವ ಲೋಪದೋಸ, ಬೂಟಾಟಿಕೆ, ಬ್ರಷ್ಟಾಚಾರಗಳ ವಿಡಂಬನಾತ್ಮಕಲಿ ತೋರ್‌ಸುವ ಈ ನಾಟಕ ಜೀವನರಾಮ್ ಅವರ ನಿರ್ದೇಶನಲಿ ಬಾರಿ ಪೊರ್ಲುಲಿ ಮೂಡಿ ಬಂದುಟು. ಈ ನಾಟಕನ ಆದಸ್ಟ್ ಇಲ್ಲಿನ ಸಂದರ್ಬಕ್ಕೆ ಹೊಂದಿಕೊಂಬ ರೀತಿಲಿ ಅನುವಾದ ಮಾಡಿಕೆ ಪ್ರಯತ್ನ ಮಾಡ್ಯಳೆ. ಈ ನಾಟಕದ ಮೂಲಕ ಅರೆಭಾಷೆ ಅಕಾಡೆಮಿ ಅರೆಬಾಸೆನ ಇಡೀ ಕರ್ನಾಟಕಕ್ಕೆ ಪರ್ಚಯ ಮಾಡ್ತ್. ಕರ್ನಾಟಕದ ಸುಮಾರ್ 15 ಕಡೆಲಿ ಈ ನಾಟಕ ಪ್ರದರ್ಸನ ಆಗಿ ಜೆನಂಗ ನಾಟಕ, ಮತ್ತೆ ಅರೆಬಾಸೆನ ಮೇಲೆ ಮೆಚ್ಚಿಗೆ ತೋರ್‌ಸಿದೊ.

ಹೂವುನೊಟ್ಟ್‌ಗೆ ನಾರ್ ಸೇರ್‌ದಂಗೆ ನಂಗೆ ಈ ನಾಟಕನ ಅರೆಬಾಸೆಗೆ ತರ್ಜುಮೆ ಮಾಡಿಕೆ ಅವಕಾಸ ಕೊಟ್ಟ್, ಈಗ ಅದರ ಮುದ್ರಿಸಿ, ಪ್ರಕಟಣೆ ಮಾಡ್ತಾ ಇರ್‌ವ ಅರೆಭಾಷೆ ಅಕಾಡೆಮಿನ ಅಧ್ಯಕ್ಷರ್‌ಗೆ, ಸದಸ್ಯರ್‌ಗೆ ಹಾಂಗೆ ಪೊರ್ಲುಲಿ ನಿರ್ದೇಶನ ಮಾಡಿ ಅರೆಬಾಸೆ ಬೆಳ್ಸಿಕೆ ಉತ್ತೇಜನ ಕೊಟ್ಟ ರಂಗ ಮಾಂತ್ರಿಕ ಜೀವನರಾಮ್ ಮತ್ತೆ ಅವರ ಶಿಷ್ಯಂದಿರ್‌ಗೆ, ಹಾಂಗೆ ಪ್ರೋತ್ಸಾಹಿಸಿದ ಎಲ್ಲವ್ಕೂ ನನ್ನ ದನ್ಯವಾದಗ.

**ಜಯಪ್ರಕಾಶ್ ಕುಕ್ಕೇಟಿ**
(ಮೇಲ್ಮನೆ), ಸುಳ್ಯ
ಮೊ : 9449662390

## ರಂಗಪಯಣಲಿ ಬಾಗವಹಿಸ್‌ದ ಕಲಾವಿದರ ಪಾತ್ರ ಪರಿಚಯ

| | | |
|---|---|---|
| ಮೇಯರ್ | – | ವಿನೋದ್ ಮೂಡಗದ್ದೆ |
| ಸಕ್ಸೇನಾ | – | ಯತೀನ್ ಹಾರಂಬಿ ವೆಂಕಪ್ಪ |
| ಮ್ಯಾಜಿಸ್ಟ್ರೇಟರ್ | – | ಕುಸುಮಾಧರ ಎ.ಟಿ. |
| ಎಜುಕೇಶನ್ ಆಫೀಸರ್ | – | ಶ್ರುತಿ ಮೆದು |
| ಕಾವೇರಿ | – | ಮಮತಾ ಕಲ್ಮಕಾರು |
| ಮೋನಿಕ | – | ಸುಶ್ಮಿತ ಪೊಯ್ಯಮಜಲು |
| ಇಂಜಿನಿಯರ್ | – | ಅಶ್ವಿನ್ ಕೆ.ಎಸ್. |
| ತಿವಾರಿ | – | ಸುಜಿತ್ ಕಾಯರಕಟ್ಟೆಮನೆ |
| ಪೊಲೀಸ್ ಇನ್ಸ್‌ಪೆಕ್ಟರ್ | – | ಭುವನ್ ಕುಂಬಳಚೇರಿ |
| ಮಾಣಿ | – | ಚೇತಸ್ ಬಂಗಾರಕೋಡಿ |
| ದೋಚಯ್ಯ | – | ರಾಜು ಮುಖೇಶ್ ಸುಳ್ಯ |
| ಬಾಚಯ್ಯ | – | ದೀಪಕ್ ಮಜಿಕೋಡಿ |
| ಪೇದೆ | – | ಶಿವಗಣೇಶ್ ಬಂಗಾರಕೋಡಿ |
| ಬಡ್ಡಿ ಬಂಗಾರಮ್ಮ | – | ಯೋಗಿತಾ ಬಂಗಾರಕೋಡಿ |
| ಗುಡ್ಡಪ್ಪ | – | ನಿತ್ಯಾನಂದ ಮಲೆಯಾಳ |
| ಡಾಕ್ಟರ್ | – | ಅಮೃತ್ ಕುಕ್ಕೇಟಿ |
| ಪೋಸ್ಟ್ ಮಾಸ್ಟರ್ | – | ವಿಲಾಸ್ ರಾವ್ |

**ರಂಗದ ಹಿಂದೆ:**

| | | |
|---|---|---|
| ವಸ್ತ್ರ ವಿನ್ಯಾಸ | – | ಗುರುಮೂರ್ತಿ ವರದಮೂಲ |
| ರಂಗ ವಿನ್ಯಾಸ | – | ಪ್ರಕಾಶ್ ಪಿ ಶೆಟ್ಟಿ<br>ರಂಗಮಂಟಪ ಬೆಂಗಳೂರು |
| ಬೆಳಕು ನಿರ್ವಹಣೆ | – | ಶಿಶಿರ ಕಲ್ಲೂರ |
| ಸಂಗೀತ ಸಹಕಾರ | – | ಗೀತಂ ಗಿರೀಶ್ ಉಡುಪಿ |
| ವಾಹನ ಚಾಲಕ | – | ಹುಲಿಮನೆ ಜೀವನ್ |

# ಅಂಕ – 1

(ಮೇಯರ್ ಕಚೇರಿ. ಮೇಯರ್ ಮುತ್ತಣ್ಣ, ಸೆಕ್ರಟರಿ ಗುಡ್ಡಪ್ಪ, ಮ್ಯಾಜಿಸ್ಟ್ರೇಟ್ ಪೊಣಚ್ಚ, ಬಿ.ಇ.ಒ ಸಾವಿತ್ರಮ್ಮ, ವೈದ್ಯಾಧಿಕಾರಿ ಡಾ|| ಕುಂಞಿಕುಂಞಿ, ಇಂಜಿನಿಯರ್ ಬೆಳ್ಯಪ್ಪ ಗಾಬರಿಂದ ಅತ್ತಿತ್ತ ಫೋನ್ಲಿ ಮಾತಾಡಿಕಂಡ್ ಓಡಾಡಿಕಂಡ್ ಒಳೊ. ಜವಾನ ಕಾಫಿ ಹಂಚುತ್ತಿದ್ದಾನೆ. ಮುಗಿಯುತ್ತಿದ್ದಂತೆ)

ಮೇಯರ್ : ಲುಕ್ಹಿಯರ್.... ಎಲ್ಲವೂ ಬಂದಳರಿಯಲ್ಲ.....

ಎಲ್ಲವೂ : ಎಸ್ ಸರ್ ಕರೆಕ್ಟ್ ಟೈಂ

ಮೇಯರ್ : ಈಗ ಒಂದು ಗಂಭೀರ ವಿಷಯ ಮಾತಾಡಿಕೆ ಉಟ್ಟು.

ಎಲ್ಲವೂ : ಗಂಭೀರ!!!?

ಮೇಯರ್ : ಹಾಂ...ಅದ್ಕೆ ನಿಮ್ಮೆಲ್ಲರ ಕರ್ಸಿದ್. (ಜವಾನ ಕಡೆ ನೋಡಿ) ನಿನ್ನದ್ ಆತ್ಲೆನಾ... (ಕೈ ಸನ್ನೆ ಮಾಡುವರು. ಜವಾನ ಹೋಗುತ್ತಾನೆ) ಹ್ಞಂ... ವಿಷಯ ಎಂತಾಂತೇಳ್ರೆ, ನಮ್ಮ ಊರ್‌ನ ಆಡಳಿತ, ಅಭಿವೃದ್ಧಿ ಕೆಲಸಗಳ ತಪಾಸಣೆ ಮಾಡಿಕೇಂತ ಡೆಲ್ಲಿಂದ ಒಬ್ಬ ದೊಡ್ಡ ಆಫೀಸರ್ ಬಂದವೆಗಡ.

ಮ್ಯಾಜಿಸ್ಟ್ರೇಟ್ : ಹೌದಾ.... ಮತ್ತೆ ನಾವ್ಗೆ ಸರ್ಕ್ಯುಲರ್ ಬಾತ್ಲೆ ಅಲ್ಲ..

ಇಂಜಿನಿಯರ್ : ಹೌದಲ್ಲ..

ಮೇಯರ್ : ಸರ್ಕ್ಯುಲರ್ ಬಾದುಲೆ... ಯಾಕೇಂತೇಳ್ರೆ ಇದ್ ಸೀಕ್ರೇಟ್ ತಪಾಸಣೆಗಡ. ಅವು

ಐ.ಎ.ಎಸ್. ಆಫೀಸರ್‌ಗಡ.

ಇಂಜಿನಿಯರ್ : ಹಾಂಗೆಲ್ಲ ಇದುವರೆಗೆ ಯಾರೂ ಹೇಳದೆ ಕೇಳದೆ ಬಂದದೇ ಇಲ್ಲೆಲ್ಲಾ....

ಬಿ.ಇ.ಒ : ಸೆಂಟ್ರಲ್ಲಾ.... ಸ್ಟೇಟಾ.... ಎಸಿಬಿನಾ.. ಸಿಓಡಿ ನಾ....

ಮೇಯರ್ : ನಂಗೆ ನಿನ್ನೆ ಹಿಂಬೋತ್ತ್‌ಂದಾನೇ ಏನೋ ಒಂತರಾ ಆತಿತ್. ಏನೋ ಒಂದ್ ಗಂಡಾಂತರ ಉಟ್ಟೂಂತ್ ಸಪ್ನ ಬಿದ್ದಂಗಿತ್. ಹೊಟ್ಟೆ ಒಳಗೆ ಹುಳ ಮೆದ್ಕಿದಂಗೆ... ರಾತ್ರಿ ಕನ್ಸಲಿ.... ಮನೆಗೆ ಎರ್ಡ್ ಉಡು ಹುಕ್ಕಂಗೆ... ಎರ್ಡ್ ಹೆಗ್ಗಣಂಗ... ಬಾಗ್‌ಲಿಲಿ ಹುಕ್ಕ್ ಸೀದಾ ಬಂದ್ ನನ್ನ ಮಂಚದ ಮೇಲೆ ಹತ್ತಿ ನನ್ನನೇ ಪಿಳಿಪಿಳಿಂತಾ ನೋಡಿ ಒಟ್ಟಿಗೆ ಸೀನ್ದೊ. ನಂಗೆ ಸಿಕ್ಕಾಬಟ್ಟೆ ಗಾಬ್ರಿ ಆತ್. ಬಡಕ್ಕಂತ ಎದ್ದೆ. ನೋಡ್ರೆಕನ್ಸ್. ಈಗ ನೋಡ್ರೆಕನ್ಸ್ ನಿಜ ಆಗುಟು.

ಬೊಳ್ಪುಗೆ ಎದ್ದ್ ಹೊರಗೆ ಬಾಕೆ ಪುರುಸೊತ್ತು ಇಲ್ಲೆ....ನಮ್ಮ ಸೆಕ್ರೆಟರಿ ಗುಡ್ಡಪ್ಪಣ್ಣ ಕಾಗದ ಹಿಡ್ಕಂಡ್ ನಿತ್ತುಟು.

(ಎಲ್ಲರೂ ಗಾಬರಿ ಬೀಳುತ್ತಾರೆ. ಬಿ.ಇ.ಒ ಕೈಯಿಂದ ಕಾಫಿಕಪ್ ಶರ್ಟ್ ಮೇಲೆ ಜಾರಿ ಬೀಳುತ್ತದೆ. ಶರ್ಟ್ ಒರೆಸಿಕೊಳ್ಳುತ್ತಾಳೆ.)

ಮ್ಯಾಜಿಸ್ಟೇಟ್ ಎಂತ ಮಾರ್‍ರೆ... ತಲೆಗೆ ಮರ ಬೀತಾ... ಥೆಕ್... ನಿಮ್ಮ ಅಂಗಿ ಪೂರಾ ಕಾಫಿ ಹೀರ್ತ್.

ಮೇಯರ್ : ಪೂಣಚ್ಚ... ವಿಷಯ ಬದಲ್ಸಬಡಿ. (ಬಿ.ಇ.ಓ ಕಡೆ ನೋಡಿ) ನೀವೆಂತ ಮಾರ್ರೆ... ಮಕ್ಕಳಂಗೆ..

ಎಲ್ಲರೂ : ಎಂತ ಕಾಗದ?

ಮೇಯರ್ : ಡೆಲ್ಲಿಲಿ ಸಿಬಿಐ ಆಫೀಸ್ಲಿ ಒಳೊ ಅಲ ನನ್ನ ಹೆಣ್ಣ್‌ನ ತಮ್ಮ ಚೆಣ್ಣಪ್ಪ ಭಾವ. ಅವ್ ಬರ್ದ ಕಾಗದ. ಲುಕ್ ಹಿಯರ್.. ಇದೇ ಕಾಗದ

ಎಲ್ಲರೂ : ಓದಿ ಓದಿ..

ತೀರ್ಥರೂಪ ಸಮಾನರಾದ ಬಾವನವರಲ್ಲಿ ಬೇಡಿಕೊಳ್ಳುವ ಆಶೀರ್ವಾದಗಳು. ಉಭಯ ಕುಶಲೋಪರಿ ಸಾಂಪ್ರತ. ಅದಾಗಿ ಈ ಈ ಕಾಗದ ಬರೆಯಲು ಕಾರಣವೇನೆಂದರೆ, ನಂಬಲರ್ಹ ಮೂಲವೊಂದರ ಪ್ರಕಾರ ನಿಮ್ಮ ಟೌನಿಗೆ, ಟೌನಿನ ಎಲ್ಲಾ ಸರಕಾರಿ ಆಡಳಿತಕ್ಕೆ ಸಂಬಂಧಪಟ್ಟಂತೆ ಸಾರಾಸಗಟು ಇನ್ಸ್‌ಪೆಕ್ಷನ್ ನಡೆಸುವುದಕ್ಕೆಂದು ಸೆಂಟ್ರಲ್ ಗವರ್ನ್‌ಮೇಂಟ್‌ನಿಂದ ತುಂಬ ಹೈ ಲೆವೆಲ್ ಅಧಿಕಾರಿಯೊಬ್ಬರನ್ನು ನೇಮಿಸಿ ಕಳಿಸುತ್ತಿದ್ದಾರಂತೆ. ಅವರು ಬಹುತೇಕ ಸಿ.ಓ.ಡಿಯಿಂದ ಬರತಕ್ಕವರಾದ್ದರಿಂದ ಮಫ್ತಿಯಲ್ಲಿ ಬಂದರೂ ಆಶ್ಚರ್ಯವಿಲ್ಲ. ಭಯದ ಅಗತ್ಯವಿಲ್ಲದಿದ್ದಾಗ್ಯೂ ನಮ್ಮ ಬೆನ್ನ ಹಿಂದೆ ನಡೆದಿರಬಹುದಾದ ಸಣ್ಣ ಪುಟ್ಟ ಆಘಟಿತ ಘಟನೆಗಳ ಬಗ್ಗೆ ನಿಗಾ ವಹಿಸಿ. ಈ ಪತ್ರ ತಲುಪುವ ಹೊತ್ತಿಗೆ ಅವರು

ನಿಮ್ಮ ಟೌನಿಗೆ ತಲುಪಿದ್ದರೂ ಆಶ್ಚರ್ಯ ಪಡತಕ್ಕದಲ್ಲ. ಇತೀ ಚಿನ್ನಪ್ಪ.
ಲುಕ್ ಹಿಯರ್ ಗೊತ್ತಾತಲ್ಲ.. ವಿಷಯ ಹೀಂಗುಟ್ಟು. ಬಾರಿ ಗಂಭೀರ...

ಮ್ಯಾಜಿಸ್ಟೇಟ್ : (ತಲೆ ಅಲ್ಲಾಡಿಸುತ್ತಾ) ಪರಿಸ್ಥಿತಿ ಗಂಭೀರ... ಆಫೀಸರ್ ಯಾರ್.... ಜನ ಹೇಂಗೆ ಅಂತ ಗೊತ್ತಾದುಲೆ.... ನೋ..ನೋ... ಇದರ ಹಿಂದೆ ಯಾರ್ದೋ ಕೈವಾಡ ಇರೋಕು. ಬೇಕಂತಲೇ ಯಾರೋ ಹಿಡ್ಸಿ ಕೊಟ್ಟೋಳೊ...

ಬಿ.ಇ.ಒ : ಅಲ್ಲ... ಎಂತೆಂತೆಂಳ್ರೆ.. ಈ ಆಫೀಸರ್ ಇಲ್ಲಿಗೆ ಯಾಕೆ ಬಂದವೇಂತ...

ಮ್ಯಾಜಿಸ್ಟೇಟ್ : ನಿಮ್ಮ ತಲೆ..... ಅಷ್ಟುದ್ದ ಕಾಗದ ಓದ್ಯೋಳೊ.... ಹಿಯರಿಂಗ್ ಬೇರೆ ಆವ್ಟು ಮತ್ತೇ ಬುಡಕ್ಕೆ ಬಂದರೆ ಅಲ..

ಬಿ.ಇ.ಒ : (ಆ ಕಡೆ ತಿರುಗಿ) ಅಲ್ಲ.. ಆದರೂ...

ಮೇಯರ್ : ಲುಕ್ ಹಿಯರ್.... ಸಾವಿತ್ರಮ್ಮ.... ನಮ್ಮ ಸನಿಗ್ರಾಚಾರ ಅಷ್ಟೇ... ಇತ್ತೀಚೆಗೆ ದೇಶಲಿ ಏನೆಲ್ಲಾ ಆಗ್ತಾ ಉಟ್ಟಲ್ಲಾ. ಪೇಪರ್‌ಲಿ ಟಿ.ವಿ.ಲಿ ಬರ್ತಾ ಉಟ್ಟು. ಹಾಂಗೆ ಎಡ್‌ಮಿನಿಸ್ಟ್ರೇಶನ್ ಟೈಟ್ ಮಾಡ್ತಾ ಇರೋಕು. ಒಟ್ಟಾರೆ ನಮ್ಮ ಹಣೆಬರ ಸರಿ ಇಲ್ಲೆ ಅಷ್ಟೇ....

ಮ್ಯಾಜಿಸ್ಟೇಟ್ : ನನ್ನ ಅಂದಾಜ್.... ಇದರ್ಲಿ ಬೇರೆಂತದೋ ಉಟ್ಟು. ಅಸ್ಸಾಂಲಿ ದೊಂಬಿ, ಪಂಜಾಬ್‌ಲಿ ಗಲಾಟೆ, ಕಾಶ್ಮೀರಲಿ ಜಟಾಪಟಿ. ಪಾಕಿಸ್ತಾನದ

ಕೈವಾಡಂತ ಸುದ್ದಿ. ಅದ್ಕೆ ಮಿನಿ ಏನಾರ್ ಆಗಿರ್‌ಕೂ ಸಾಕ್. ಹೇಳಿಕೆ ಬಾದ್ಲೆ. ಈ ನುಸುಳುಕೋರರ ಹಿಡೆಕೆಂತ ಗುಟ್ಟ್‌ಲಿ ಕಳ್ಸಿರಿಕೂ ಸಾಕ್...

ಬಿ.ಇ.ಒ : ಹಾಂಗಿದ್ದರೆ ಸೆಂಟ್ರಲ್‌ಂದ ಆಗಿರಿಕೂ ಸಾಕ್...

(ಪೊಲೀಸ್ ಪೇದೆ ಹೊರಗೆಂದ ಒಮ್ಮೆ ಸೀನಿದೆ. ಗಾಬರಿ.)

ಮೇಯರ್ : (ಪೇದೆಗೆ) ಯೂ ಶಟಪ್ಪ್..

(ಎಲ್ಲವ್ಕೆ) : ಲುಕ್ ಹಿಯರ್.. ನಾಳೆ ಬೆಳಿಗ್ಗೆನೆ ಎಲ್ಲವುಕೂ ಮೆಮೋ ಕಳ್ಸಿ. ಗೊತ್ತಾತಲ್ಲ...... ನೀವೆಲ್ಲಾ ಅಲರ್ಟ್ ಆಗಿರೋಕು. ಏ...... ಇಂಜಿನಿಯರ್ ಸುರೂಗೆ ಸಿಕ್ಕಿ ಬೀಳ್ದ್ ನಿಮ್ಮ ಪಿಡಬ್ಲ್ಯೂಡಿ ಡಿಪಾರ್ಟ್‌ಮೆಂಟ್. ನಿಮ್ಮ ಆಫೀಸಿಗೆ ಫಿನಾಯಿಲ್ ಹಾಕಿ ತೊಳ್ಸಿ. ಗೋಡೆ ಎಲ್ಲಾ ಪಳಪಳಂತ ಹೊಳೆಕು.

ಎಂಜಿನಿಯರ್ : ನಾಳೆ... ನಾಳೆನೇ ಮಾಡ್ಸಿನೆ... ನಮ್ಮ ಕಂಟ್ರಾಕ್ಟರ್‌ಗಳಿಗೆ ಹೇಳ್ರೆ ಮುಗ್ತ್. ಎಲ್ಲ ರೆಡಿ ಆದೆ. ಆದರೆ ಯಾವುದಕ್ಕೂ ಈ ಡಾಕ್ಟ್ರಿಗೆ ಒಂದ್ ಮಾತ್ ಹೇಳಿ ಬುಡಿ. ಅವರ ಆಸ್ಪತ್ರೆಗೆ ನೋಡಿಕಾದುಲೆ.

ಮೇಯರ್ : ಎಸ್.. ಎಸ್... ಡಾಕ್ಟ್ರೇ ಲುಕ್ ಹಿಯರ್... ನಿಮ್ಮ ಆಸ್ಪತ್ರೆ ಎಂತ ಮಾರಾಯ್ರೇ.... ನಿಮ್ಮ ಎಟೆಂಡರ್‌ಗಳೊಟ್ಟಿಗೆ ಪೇಷೆಂಟ್‌ಗಳು ನಿತ್ತ್‌ಕಂಡ್ ಬೀಡಿ ಎಳೆತಾ ಇದ್ದವೆ. ಜಗಲಿಲಿ, ವಾರ್ಡ್‌ಲೆಲ್ಲಾ ಬೀಡಿ ತುಂಡು

ಬಿದ್ದ್‌ಕಂಡ್ ಇದ್ದದೆ. ಅದರೆಲ್ಲ ಕ್ಲೀನ್ ಮಾಡ್ಸಿ. ಆಸ್ಪತ್ರೆಲಿ ಕಾಲ್ ಹಾಕಿಕೆ ಜಾಗ ಇಲ್ಲೆ. ಯಾಕೆ ಅಷ್ಟೊಂದು ಪೇಷೆಂಟ್‌ಗಳ ತುಂಬ್ಸಿಯರಿ. ಸ್ವಲ್ಪ ಜನರ ಮನೆಗೆ ಕಳ್ಸಿ. ಮತ್ತೆ ಆ ನರ್ಸ್‌ಗಳಿಗೆ ಸ್ವಲ್ಪ ಹೇಳಿ. ಯಾಗ ನೋಡ್ರೂ ಮೊಬೈಲ್ಲೇ ಇದ್ದವೆ. ಫೇಸ್ಬುಕ್, ವಾಟ್ಸಪ್ ತ. ಬರ್ತಾ ಒಳದ ದೊಡ್ಡ ಆಫೀಸರ್ ನೋಡ್ರೆ ಏನ್ ಹೇಳಿಕಿಲೆ.

ಡಾಕ್ಟರ್ : ಆಯ್ದು ಸಾರ್..... ನಿನಗೆ ತಲೆಬಿಸಿ ವೇಂಡ... ಅದನ್ನೆಲ್ಲ ನಾವು ಶರಿ ಮಾಡ್ತದೆ.....

ಮ್ಯಾಜಿಸ್ಟ್ರೇಟ್ : ಓಯ್.... ಬಂದ್ ಇಷ್ಟ್ ವರ್ಷ ಆತ್. ಒಂದ್ ಕನ್ನಡ ಶಬ್ದ ಸರಿ ಬಾದ್ಲೆನಾ.... ಅಧ್ಯಕ್ಷರಿಗೆ ನೀನುಂತೇಳ್ರೆ ಅಲ.. ಹೇಂಗೇ, ನೀನು ಅಲ್ಲಮಾರ್ರೆ.. ನೀವೂ.....

ಡಾಕ್ಟರ್ : ಅದ್ ಶರಿ.... ನೀನು ತಲೆಬಿಸಿ ಮಾಡಬೇಡ.... ಎಲ್ಲ ನಾವು ಶರಿ ಮಾಡ್ತದೆ... ಅರ್ಧ ಪೇಷೆಂಟ್ ಮನೆಗೆ ಕಳಿಸ್ತದೆ... ಪೆಣಾಯ್ಲ್ ಡಬ್ಬಡಬ್ಬ ಹಾಕಿ ಕಂಬ್ಲೀಟ್ ಕ್ಲೀಣ್...

ಮ್ಯಾಜಿಸ್ಟ್ರೇಟ್ : ತಥ್.... ಇವ ಕನ್ನಡ ಕೊಂದತ್.....

ಮೇಯರ್ : ಲುಕ್ ಹಿಯರ್ ಮಿ. ಪೂಣಚ್ಚಾ... ನೀವೂ ಹಂಞ ಹುಷಾರಾಗಿ ಇರೊಕು. ನಿಮ್ಮ ಆ ಆಫೀಸ್ ಕಮ್ ಗೆಸ್ಟ್‌ಹೌಸ್ ಉಟ್ಟಲ ಅದರ ಹಂಞ ಕ್ಲೀನ್ ಇಸಿಕಣಿ... ಅದರ್ಲಿ ಎಸ್ಟ್ ಕೋಳಿ ಸಾಂಕಿಯಳರಿ ಮಾರಾಯ್ರೇ....

ಅದು ಸರಕಾರಿ ಮನೆಯೋ.... ಕೋಳಿ ಫಾರ್ಮೋ... ಸುರೂಗೆ ಅದರ ಕ್ಲೀನ್ ಮಾಡ್ಸಿ. ಆ ಕೋಳಿ ತಂದ್ ಇಲ್ಲಿ ಹಾಕಿ... ಆಫೀಸರ್ ಬಾಕನ ಬೇಕಾದು. ಗೈಪು ಮಾಡಿಕೆ.....

ಮ್ಯಾಜಿಸ್ಟ್ರೇಟ್ : ಹ್ಞಾಂ... ಹ್ಞಾಂ.... ಕ್ಲೀನ್ ಮಾಡ್ಸಿನೆ. ಕೋಳಿ ತಂದ್ ಕೊಡೊಮೊ....

ಮೇಯರ್ : ಮತ್ತೆ ಪೂಣಚ್ಚಾ... ನಿಮ್ಮ ಆಫೀಸ್‌ನ ಹೆಡ್‌ಕ್ಲರ್ಕ್ ಚೆಯರ್‌ಲೇ ಕುದ್ದ್ ಬೀಡಿ ಎಳ್ದದೆ. ಅವಂಗೆ ವಾರ್ನಿಂಗ್ ಕೊಡೊಕು. ಮತ್ತೆ.... ಉಳ್ದ ಕ್ಲರ್ಕ್‌ಗ ಆಫೀಸ್‌ನೊಳಗೆ ಕುದ್ದ್‌ಕಂಡ್ ಮೊಬೈಲ್ಲಿ ಗೇಮ್ ಆಡ್ತಾ ಇದ್ದವೆ... ಅವ್ಕನೂ ಹೇಳಿ.... ಪುರುಸೊತ್ತು ಇರ್‌ಕನ ಆಡಲಿ.... ಆದರೆ ಈಗ ದೊಡ್ಡ ಆಫೀಸರ್ ಬಾಕನ ಸ್ವಲ್ಪ ಜಾಗ್ರತೆಲಿ ಇರೋಕು... ಮರ್ಯಾದೆ ಹೋದು... ಗೊತ್ತಾತಾ.... ಬಾವ ಬರ್‍ದುಟಲ ಸಣ್ಣ ಪುಟ್ಟ ತಪ್ಪು ಅಂತ.... ಜಾಗ್ರತೆ... ಹೇಳ್ದಂಗೆ ಅದೆಂತ ಮಾರಾಯ್ರೆ.. ಆಫೀಸ್‌ನಲ್ಲಿ ಬದನೆಕ್ಯಾ ಬೆಂಡೆಕ್ಯಾ ರಾಶಿ.... ರಾಶಿ...

ಮ್ಯಾಜಿಸ್ಟ್ರೇಟ್ : ಹಾಂಗೇನೂ ಇಲ್ಲೆಪ್ಪಾ.... ಕೆಲವು ಜನ ಅದ್ ಇದ್ ಅಂತ ಬಾಕನ ಹಿಡ್ಕಂಡ್ ಬಂದವೆ... ಬೇಡಾಂತೇಳ್ರೇ ಅವುಕೆ ಬೇಜಾರಾದೆ. ಅದಕೆಲ್ಲ ಲಂಚಂತೇಳಿಕೆ ಆದೆನಾ.... ಅದ್ ಪ್ರೀತಿ.... ವಿಶ್ವಾಸ....

ಮೇಯರ್ : ನಿಮ್ಮ ಪ್ರೀತಿ ವಿಶ್ವಾಸಕ್ಕೆ ಕಿಚ್ಚಿ ಹೆಟ್ಟಿತ್. ಲುಕ್

ಹಿಯರ್. ಅದು ಕೂಡಾ ಲಂಚಾಂತಲೇ ಆದೆ. ಗೊತ್ತಾತಲ!!

ಮ್ಯಾಜಿಸ್ಟ್ರೇಟ್ : ಅಲ್ಲಾ... ತರಕಾರಿ ಕೊಟ್ಟದರ ಲಂಚಂತೇಳ್ರೆ ಈ ವರ್ತಕ ಸಂಘದವು ಸನ್ಮಾನ ಮಾಡಿ, ಶಾಲು ಹಾಕಿ ಮೇಲೊಂದು ಕೋಟು ಪೇಟ ಕೊಟ್ಟರೆ ಅದು ಕೂಡಾ ಲಂಚಾನೆ ಆದುಲೆನಾ.. ಆದುಲೆನಾ ಸರ್...

ಮೇಯರ್ : (ಸ್ವಗತ) ಇಂವ ನಂಗೇ ಇಸಿತಲ್ಲ. ಮ್ಯಾಜಿಸ್ಟ್ರೇಟ್‌ರೆ.. ಅದೆಲ್ಲ ಈಗ ಬೇಕಾ... ಐ ಮೀನ್ ಬಾದು ದೊಡ್ಡ ಆಫೀಸರ್. ನಾವೆಲ್ಲ ಹ್ಯಾಂಗಿರೋಕು... ಇಂಪ್ರೆಸ್ ಮಾಡೊಕು... ಇಂಪ್ರೆಸ್...

ಬಿ.ಇ.ಓ : ಹೌದು... ಇಂಪ್ರೇಸ್.. ಇಂಪ್ರೆಸ್ ಮಾಡೋಕು.

ಮೇಯರ್ : ಈ ಬಿ.ಇ.ಓನ ನೋಡಿ... ಇವರ ಶಾಲೆನ ಮಾಸ್ಟ್ರುಗ ಹೆಂಗೊಳೊ.... ಬಾರೀ ಸಂಭಾವಿತರರು, ಗೌರವಸ್ಥರು, ಬುದ್ಧಿವಂತರು, ಜ್ಞಾನಿಗ...

ಮ್ಯಾಜಿಸ್ಟ್ರೇಟ್ : ಸಾರ್... ಜಾಸ್ತಿ ಹೇಳ್‌ಬಡಿ... ಕಳ್ದ ವರ್ಸ... ಎರ್ಡ್ ಕಂಪ್ಲೈಟ್ ಆಗುಟ್ಟು... ಆ.. ಮಾಸ್ಟ್ರು.... ಮತ್ತು ಟೀಚರ್....ದ್

ಮೇಯರ್ : ಓಹ್.. ನನ್ನ ತಲೆಬಿಸಿ ನಂಗೆ.. ನಿಮ್ಮದೊಂದ್... ಹಾಂ ಸಾವಿತ್ರಮ್ಮ. ಆ ಪಂಡಿತರ ಕತೆ ಎಂತ ಆತ್

ಬಿ.ಇ.ಓ : ಓ.... ಅದಾ..... ಹಾಂಗೆ ಮೊನ್ನೆ ಶಾಲೆಗೆ

ಗಡಿಬಿಡಿಲಿ ಬಂದೊವು.. ಬಾರಿ... ಸ್ಪೀಡ್‌ಲಿ ರಾಮಾ... ರಾಮೌ.... ರಾಮಾಃ... ಅಂತ ಮಾಡ್ ಹಾರಿ ಹೋಗುವಂಗೆ ಬೊಬ್ಬೆ ಹಾಕಿ ಮೇಜು ಗುದ್ದಿದರ್ಲಿ ಒಂದ್ ಕಾಲೇ ಮುರ್ದ್ ಹೋಗುಟು....

ಡಾಕ್ಟರ್ : ಪಂಡಿದರ್ದಾ...

ಬಿ.ಇ.ಓ : ಅಲ್ಲಪ್ಪಾ.. ಮೇಜಿನ ಕಾಲ್.

ಮೇಯರ್ : ಕರ್ಮ... ಕರ್ಮ.... ಆಫೀಸರ್ ಬಾಕನ ಇದೆಲ್ಲ ಆಗದಂಗೆ ನೋಡಿಕಣಿ. ಆ ಪಂಡಿತರ್‌ಗೆ ಯಾಗ ಯಾ ರಿಟೈರ್... ಓ.... ದೇವ್ರೆ. ಎಂತ ಬೊಬ್ಬೆ. ಮಾರ್ಗಕ್ಕೆ ಕೇಳ್ದ್.... ಅಂಡೆ ಬಾಯಿನಾರ್ ಕಟ್ಟಕ್, ದೊಂಡೆಬಾಯಿ ಕಟ್ಟಿಕೆ ಆದುಲೆ..

ಮ್ಯಾಜಿಸ್ಟೇಟ್ : ಪ್ರಾಯ ಆತಲ್ಲ..... ಪ್ರಾಯ ಆಕನ ಎಲ್ಲವೂ ಹಾಂಗೇ... ಅರ್ಲೊ.. ಮರ್ಲೊ....

ಮೇಯರ್ : ಇಂವ ಮತ್ತೆ ನಂಗೇ ಇಸಿತೋಂತಾ (ತಿರುಗಿ) ಲುಕ್ ಹಿಯರ್... ಐ ಮೀನ್.. ಎಲ್ಲ ಜಾಗ್ರತೆ. ನಂಗೆ ಈ ಇಂಜಿನಿಯರ್‌ದೇ ಹೆದ್ರಿಕೆ.

ಇಂಜಿನಿಯರ್ : ಯಾಕೆ ಸರ್

ಮೇಯರ್ : ಕತ್ತಲಾದ ಮೇಲೆ ಅವಂಗೆ ಅಕಲಿರ್ದುಲೆ..

ಇಂಜಿನಿಯರ್ : ಈಗ ಹಂಗೆಲ್ಲ ಇಲ್ಲೆ ಸರ್..

ಮೇಯರ್ : ಏನಿಲ್ಲೆನೋ ಏನೋ. ಅವ್ಕೆ ಏನ್ ಗೊತ್ತು ನಮ್ಮ ಕಷ್ಟ ಬಂದಂಗೆ ಬುಲಾವ್ ಕಳ್ಸುವೆ.. ಮೇಯರ್ ಎಲ್ಲಿ, ಮ್ಯಾಜಿಸ್ಟೇಟ್ ಎಲ್ಲಿ...

ಬಿ.ಇ.ಓ ಎಲ್ಲಿ, ಪೋಸ್ಟ್‌ಮಾಸ್ಟರ್ ಎಲ್ಲಿ.... (ತಟ್ಟಕ್ಕನೆ... ಪೋಸ್ಟ್ ಮಾಸ್ತ್ರ ಪ್ರವೇಶ. ಏದುಸಿರು)

ಡಾಕ್ಟರ್ : ನಿನಗೆ ನೂರು ವರ್ಷ ಆಯಿಸ ಮಾರಾಯಾ..

ಪೋಸ್ಟ್‌ಮಾಸ್ಟರ್: (ಏದುಸಿರು) ಅದೇ ಯಾರೋ ಸಾಹೇಬರು ಬರೋರಿದಾರಂತ್ರಿ... ದೋಚಯ್ಯ ಅಂಚೆ ಕಚೇರಿಯೊಳಗ ಬಂದಿದ್ದಾರೀ... ಅವ್ರಾ ಹೇಳಕ್ಕತ್ಯಾರ. ಅದಕ್ಕ ಗಾಬ್ರಿ ಬಿದ್ದ್ ನಾ... ಬಂದಿದ್ದರಿ......

ಮೇಯರ್ : ಯಾರು ಬರ್ತಾ ಒಳೊ ಅಂತ ಗೊತ್ತಾತ....

ಪೋಸ್ಟ್‌ಮಾಸ್ಟರ್: ಇಲ್ರಿ... ಸಾಬ್ರ... ಅಕ್ಕಲ್ ಹರೀಲಿಲ್ರ... ಅದೇನು ಪಾಕಿಸ್ತಾನ ಕೂಡೆ ಲಡಾಯಿಅಂತಂತಂದ್ರಿ...

ಮ್ಯಾಜಿಸ್ಟ್ರೇಟ್ : ಲಡಾಯಿತೇಳ್ರೆ.... ಎಂತಾ.... ಅದೆಂತ ಗಡಂಗ್ ಎದ್ರು ಹೊಡ್ಕೊಂಬೊದಾ.... ಓಯ್ ಅದ್ ಯುದ್ಧ ಮಾರ್‍ರೆ.... ಯುದ್ಧ... ವಾರ್...

ಪೋಸ್ಟ್‌ಮಾಸ್ಟರ್: ಅದಕ್ಕೇರಿ ಲಡಾಯಿ ಅನ್ನಕ್ಕತ್ತೋದು. ಲಡಾಯಿ ಅಂದ್ರ ಯುದ್ಧ. ವಾರ್‌ರೀ....

ಮೇಯರ್ : ಓ... ಸ್ಟಾಫ್ ಇಟ್... ಯುದ್ಧಕ್ಕಿಸ್ಟ್ ಕಿಚ್ಚಿ... ಈಗ ಆಫೀಸರ್ ಬರುವ ವಿಷಯ ಮಾತಾಡಿ......

ಪೋಸ್ಟ್‌ಮಾಸ್ಟರ್: ಏನ್ರಿ ಮಾತಾಡತ್ರೇರಿ.. ಲಡಾಯಿಗೇ ಕಬರಿಲ್ಲ ಅಂದ್ರ... ಆಫೀಸರ್ಗೆ ಅಂಜಿಕೆ ಯಾಕ್ರಿ... ಬರಾವಲ್ರಾಕೆ ಬಿಡ್ರಿ....

ಮೇಯರ್ : ಲುಕ್ ಹಿಯರ್... ಮಿಸ್ಟರ್

ಮುಂಡಗೋಡ್... ಖಬರ್ ಇಲ್ಲೆ ಅಂತ ಅಲ್ಲ... ಆದರೆ ಹೆದ್ರಿಕೆ ಯಾಕೆ. ನಾವು ನಿಯತ್ತ್ಂದ ಒಳೊ.... ಲಂಚ... ಪಂಚ ಒಂದೂ ಇಲ್ಲೆ.... ಎಲ್ಲ ಕೆಲ್ಸ ಕ್ಲೀನ್ ಉಟ್ಟು.. ನಾವ್ಗೆ ಎಂತ ಹೆದ್ರಿಕೆ. ಆದರೂ ಕೆಲವ್ಕೆ ನಮ್ಮೊಟ್ಟಿಗೆ ಆದುಲೆ. ಈ ವರ್ತಕ ಸಂಘದವು ಸ್ವಲ್ಪ ಹಾಂಗೇ. ಏನಾದರೂ ಚಾಡಿ ತರ್ಲೆ ಮಾಡಿ ಬುಟ್ಟರೆ ರಗಳೆ ಆದೂಂತ... ಆಂ... ಮೀ. ಮುಂಡಗೋಡ್.... ಇಲ್ಲಿ ಬನ್ನಿ (ಪ್ರತ್ಯೇಕ ಕರೆದು) ನೀವ್ಗೆ ಗೊತ್ತಿದ್ದಾಂಗೆ ಯಾರಾರ್ ಏನಾರ್ ಮೂಗರ್ಜಿ... ಗೀಗರ್ಜಿ ಮನಿ ಕಳ್ಸಿರುವನೋ.... ನೀವ್ಗೆ ಅಂದಾಜು ಇರ್ದು...

(ಪೋಸ್ಟ್‌ಮಾಸ್ತ್ರು ಕೆಕ್ಕರಿಸಿ ನೋಡುವಾಗ) ಅಲ್ಲ.. ನೀವು ಕವರ್ ಒಡ್ದ್ ಓದಿರೆತ ಅಲ್ಲ... ನೀವ್ಗೆ ಕವರ್ ಹಿಡಿಕನನೇ ಗೊತ್ತಾದೆ... ನೀವು ಎಕ್ಸ್‌ಪರ್ಟ್ ಅಲಾ...

ಪೋಸ್ಟ್‌ಮಾಸ್ಟರ್: ಅದು ಸರೀನೇ... ಅನುಮಾನ ಬಂತೂ ಅನ್ನಿ. ನಾ... ಒಡೆದು ಓದಿ ಬಿಡೋನೆ... ನಮ್ಮೂರ ಮರ್ಯಾದಿ ಪ್ರಶ್ನೆ. ನೋಡ್ರಿ.. ಹಣಕೋ ಬುದ್ದಿ ಅನ್ನಿಬ್ಯಾಡ್ರಿ.... ಒಂತರಾ ಕುತೂಹಲ... ಹಾಂಗೇ ಓದೋದ್ರಿಂದ ಪ್ರಪಂಚಜ್ಞಾನ ಹೆಚ್ಚುತ್ತೇರಿ... ಈ ಊರಿನ ಹುಡುಗ ಹುಡಿಗೇರು ಎಂತಹವರು. ಅವರೇನು ಮಾಡ್ತಾರೆ... ಯಾರು ಯಾರಿಗೆ

ಎಷ್ಟು ಪತ್ರ ಬರೀತಾರೆ ಎಲ್ಲಾ ಇಡೀ ಜಾತಕ ನನಗೊತ್ತು......

ಮೇಯರ್ : ಮುಂಡುಗೋಡ್ ಸರೀ ನೆಂಪು ಮಾಡಿಕಣಿ... ನನ್ನ ಮೇಲೆ ಯಾರಾರ್ರ್... ಸರಕಾರಕ್ಕೆ ದೂರು, ತಳ್ಳಿ ಅರ್ಜಿ ಏನಾದರೂ ಬರ್ದ್ದ್ ಮನಿ ನೀವು ನೋಡ್ಯಳರಿಯಾ... ಅಂತ......

ಪೋಸ್ಟ್‌ಮಾಸ್ಟರ್: ಇಲ್ಲ.... ಇಲ್ಲ.... ಅಂತದ್ದೇನೂ ಇಲ್ಲ.... ಹ್ಲಾಂ ಮೊನ್ನೆ ಒಂದು ಪಾರ್ಸೆಲ್ ಬಂದಿತ್ತು

ಎಲ್ಲವೂ : ಪಾರ್ಸೆಲ್?

ಪೋಸ್ಟ್‌ಮಾಸ್ಟರ್: ಬಾರೀ ಗಮ್ಮತ್ ಇತ್ತ್... ಬಿಚ್ಚಿ ನೋಡಿದ್ರೆ.... ಫಾರಿನ್ ಮ್ಯಾಗಜೀನ್.... ಪೂರ್ತಿ ಉರ್‌ಬ್ಬಿ ಚಿತ್ರಾ ರಿ....

ಮೇಯರ್ : ಥತ್... ಅದೆಲ್ಲ ಈಗ ಯಾಕೆ ಮಾರಾಯ್ರೆ.... ಬೀ ಸೀರಿಯಸ್... ಯಾರ ಮೇಲಾದ್ರು ಏನಾರ್ ಮೂಗರ್ಜಿ ಮನಿ ಹೋಗುಟ್ಟಾ ಅಂತ ನೆನ್ಪು ಮಾಡಿಕಂಡ್ ಹೇಳಿ....

ಪೋಸ್ಟ್‌ಮಾಸ್ಟರ್: ಅಂತದ್ದೇನು ಇಲ್ರೀ...

ಮೇಯರ್ : ಲುಕ್ ಹಿಯರ್... ನಿಮ್ಮದೆಂತ ಕಾಡ್ ಹರ್ಟೆ.. ನಂಗೆ ಇಲ್ಲಿತಲೆ ಬಿಸಿ ಆಗುಟ್ಟು.... ಆಫೀಸರ್ ಯಾಗ ಬೇಕಾರೂ ಬಾಕೆ ಸಾಕ್.... ಈಗ ನಾವು ಮಾತನಾಡಿಕಂಡ್ ಇರಿಕನನೇ ಬಂದ್ ಬುಡಿಕೂ ಸಾಕ್..

(ದಡದಡ ಸದ್ದು ಕೇಳಿಸುತ್ತದೆ. ಬಾಗಿಲು ತೆರೆದು ಅವಸರವಸರ ಗಾಬರಿಯಿಂದ

ಬಾಚಯ್ಯ ಮತ್ತು ದೋಚಯ್ಯ ಪ್ರವೇಶ)

ಬಾಚಯ್ಯ : ಬಂದೋ ಸಾರ್.. ಬಂದೋ...

ದೋಚಯ್ಯ : ಬಾರಿ ವಿಶೇಷ ಸುದ್ದಿ.

ಎಲ್ಲರೂ : ಹಾಂ... ಎಂತಾತ್.

ದೋಚಯ್ಯ : ಬಾರಿ ಸುದ್ದಿ... ಎಲ್ಲವ್ಕೂ ಬೇಕಾದ ಸುದ್ದಿ. ಕೆಬಿ ಕೊಟ್ಟ್ ಕೇಳಿ. ಹೇಳ್ನೆ...

ಬಾಚಯ್ಯ : ನಾ.. ಹೇಳ್ನೆ....

ದೋಚಯ್ಯ : ಬೇಡ ನಾ ಹೇಳ್ನೆ. ನೀ ರಬ್ಬರ್ ಎಳ್ದಿಯಾ... ಇಂದ್.. ಈಗ ಸ್ವಲ್ಪ ಹೊತ್ತ್‌ನ ಹಿಂದೆ ನಾವು ಪೇಟೆಲಿ... ನಡ್‌ಕಂಡ್ ಹೋಗ್ತಾ ಇದ್ದೊನಾ....

ಬಾಚಯ್ಯ : ನಾನೂ ಇದ್ದೆ ಅವರೊಟ್ಟಿಗೆ... ಅವು ಒಬ್ಬನೇ ಅಲ್ಲ..

ದೋಚಯ್ಯ : ಓಯ್... ಬಾಚಯ್ಯ... ಸುಮ್ಮನೆ ಇದ್ಯರಾ... ನಾ ಹೇಳ್ನೆ... ನಾವಿಬ್ಬರೂ ಹೋಗ್ತಾ.... ಇದ್ದೊ....

ಬಾಚಯ್ಯ : ಓಯ್... ನೀವು ರಾಮಾಯಾಣ ಮಾಡ್ಬಡಿ... ನೀವ್ಗೆ ಹೇಳಿಕೆ ಗೊತ್ತಿಲ್ಲೆ..... ನಾ ಹೇಳ್ನೆ....

ದೋಚಯ್ಯ : ಬೇಡ ಬೇಡ... ನಾನೇ ಹೇಳ್ನೆ.

ಬಾಚಯ್ಯ : ನೀವು ಕಥೆ, ಉಪಕಥೆ ಹೇಳಿ ಮುಗ್ಸ್‌ಕನ ಬೊಳ್ಪಾದು.... ರಗಳೆ ಮಾಡ್ಬಡಿ. ನಾ ಹೇಳ್ನೆ...

ದೋಚಯ್ಯ : ನಾನೇ ಶುರು ಮಾಡ್ದ್. ನಂಗೊತ್ತುಟ್ಟು ಹೇಂಗೆ ಹೇಳೋಕೂಂತ... ನಡುಲಿ ಬಾಯಿ ಹಾಕ್ಬಡಿ....

ಮೇಯರ್ : (ತಾಳ್ಮೆಗೆಟ್ಟು) ಏ... ಸ್ಟಾಪಿಟ್..... ನಿಮ್ಮದೆಂತದ್‌ಯಾ.... ಸಣ್ಣ ಮಕ್ಕಳಂಗೆ.. ಯಾರಾದ್ರೊಬ್ಬ ಸರಿಯಾಗಿ ಹೇಳಿ... ಕಿರಿಕಿರಿ ಮಾಡ್ಬಡಿ... ಬನ್ನಿ. ಇಬ್ಬರೂ ಒಂದ್ಕಡೆ ಕುದ್ರಿ... ಆಮೇಲೆ ವಿಷಯ ಎಂತ ಹೇಳಿ.

ಬಾಚಯ್ಯ : ಮೇಯರ್ ಸಾಹೇಬ್ರೆ.., ಎಲ್ಲ ಸರಿ ಕೇಳಿಕಣಿ... ಇಂದ್ ಬೆಳಗ್ಗೆ... ನಾ... ನಿಮ್ಮ ಮನೆಗೆ ಬಂದಿದ್ದೆನಾ... ನೀವು ಕಾಗದ ಓದಿ ತಲೆ ಮೇಲೆ ಮರ ಬಿದ್ದಾಂಗೆ ಕುದ್ದಿದ್ದರಾ.... ವಿಷಯ ನಂಗೆ ಗೊತ್ತಾತ್... ನೀವ್ ಹೆದ್ರ್‌ಬಡಿಂತೇಳಿ ನಾ ಹೋದೆನಾ.. (ದೋಚಯ್ಯ ಬಾಯಿ ಹಾಕಲು) ದೋಚಯ್ಯ... ನಡುಲಿ ಬಾಯಿ ಹಾಕ್ಬಡಿ.. ಆಮೇಲೆ ನಾ ಹೋದೆ. ನಾ.... ಅಲ್ಲಿಂದ ದಾಸಪ್ಪಣ್ಣ ಮನೆಗೆ ಹೋದೆ. ಅವು ಇತ್ತ್‌ಲೆ. ಅಲ್ಲಿಂದ ಸೀದಾ... ಸೀತಣ್ಣನ ಮನೆಗೆ ಹೋದೆ. ಅವು ಎಲ್ಲಿಗೋ ಹೊರ್ಟ್‌ಕಂಡ್ ಇದ್ದೊ.... ಅಲ್ಲಿನೂ ವಿಷಯ ಹೇಳಿಕೆ ಆತ್‌ಲೆ. ಆಮೇಲೆ ಸುಬ್ರಾಯನ ಗೂಡಂಗಡಿಗೆ ಹೋದೆ. ಅಲ್ಲಿ ನಾಲ್ಕೈದು ಜನ ಬೀಡಿ ಎಳ್ಕಂಡ್ ಕುದ್ದಿದ್ದೊ.... ಅಲ್ಲಿ ಹೇಳೊಕು ಅಂತ ಅಂದಾಜಿ ಮಾಡಿಕನ ನನ್ನ ನೋಡಿ ಒಬ್ಬೊಬ್ಬನೆ ಜಾರ್‍ದೊ.... ಗೂಡಂಗಡಿಂದ ಸೀದಾ ಮಾಸ್ಟ್ರ ಮನೆಗೆ ಹೋದೆ. ಅವು ಶಾಲೆಗೆ ಹೋಗಿದ್ದೋ.... ಅವರ ಮಂಜ

ಇತ್ತ್. ಕುದ್ರಿ... ಕಾಫಿ ಕುಡ್ದ್ ಹೋಗಿಂತೇಳಿ ಒಳಗೆ ಹೋದವ ಬಾತೇಇಲ್ಲೆ. ಮಾಸ್ಟ್ರ ಹೆಣ್ಣ್ ಹಟ್ಟಿಲಿ ಪರೆಂಚಿಕಂಡ್ ಇದ್ದೊ..... ಇದ್ ಆಕಿಲೇಂತ ಈಚೆ ಬಾಕನಾ ಈ ಮುಂಡು ಬೀಡಿ ಸಿಕ್ಕಿದೊ..

ಪೋಸ್ಟ್‌ಮಾಸ್ಟರ್: ನೋ ಮುಂಡು ಬೀಡಿ.. ಮಿ. ಮುಂಡಗೋಡ್.... ಪಿ.ಎಂ. ಮುಂಡಗೋಡು.

ಬಾಚಯ್ಯ : ಎಂತದೋ ಒಂದು. ನಡುಲಿ ಬಾಯಿ ಹಾಕ್ ಬಡಿಯಾ. ಇವರೊಟ್ಟಿಗೆ ಅರ್ಥಂಬರ್ಥ ಹೇಳಿ ಆಚೆ ಹೋಕನ ಈ ದೋಚಣ್ಣ ಸಿಕ್ಕಿದೊ....

ದೋಚಯ್ಯ : ಇನ್ನ್ ನಾ ಹೇಳ್ನೆ... ಅದೇ ಶಾಂತಿಭವನದ ಹಕ್ಕಲೆ ಇವು ಸಿಕ್ಕಿದೋ.

ಬಾಚಯ್ಯ : ಹಾಂ.. ಹೌದು. ಶಾಂತಿಭವನದ ಹಕ್ಕಲೆ ಸಿಕ್ಕಿದೋ. ಇಬ್ಬರೂ ಒಳಗೆ ಹೋಗಿ ಕುದ್ದ್ ಚಾಯಕ್ಕೆ ಹೇಳಿ 'ದೋಚಣ್ಣ ಹೀಂಗಿಂಗೇ... ಹೀಂಗೀಂಗೇ... ಮೇಯರ್‌ಗೆ ಡೆಲ್ಲಿಂದ ಒಂದು ಕಾಗದ ಬಂದುಟ್ಟುಗಡ. ಮೇಟರ್ ಬಾರಿ ಸೀರಿಯಸ್ ಗಡ.. ಅಂತ ಹೇಳ್ಕನನೇ ಅವ್ಕೆ ವಿಷಯ ಗೊತ್ತಾದ್..

ದೋಚಯ್ಯ : ನಂಗೆ ವಿಷಯ ಮೊದಲೇ ಗೊತ್ತಾವ್ಟು. ನಿಮ್ಮ ಸೆಕ್ರೆಟರಿ.. ನೀವ್ಗ್ ಮೂಂಕು ಹೊಡಿತಾಕೇಂತ ಗೂಡಂಗಡಿಗೆ ಹೋತಿತ್ತಾ.... ಅಂವ ಹೇಳ್ತ್.

ಮೇಯರ್ : ಓ... ಮಾರಾಯ್ರೆ... ನಿಮ್ಮ ರೈಲು

ಹೊರ್ಟ್ ಸುಮಾರ್ ಹೊತ್ತಾತ್.... ಒಂದ್ ಸ್ಟೇಶನ್‌ಲಾರ್ ನಿಲ್ಸಿ ಮಾರಾಯ್ರೆ...

ಬಾಚಯ್ಯ : ಹ್ಹಾಂ... ಇದೇ ಸ್ಟೋಪ್... ಅಲ್ಲಿಂದ ನಾವು ಮಾತಾಡಿಕಂಡ್ ಬಸ್‌ಸ್ಟಾಂಡ್ ದಾಟಿ ಹೋಕನ ಅಶ್ವಿನಿ ಲಾಡ್ಜ್‌ನ ಎದುರು ಮ್ಯಾನೇಜರ್... ಜತ್ತಪ್ಪಣ್ಣ ನಿತ್ತ್‌ಕಂಡ್ ಇತ್ತ್.. ಅಂವಂಗೆ ನಮಸ್ಕಾರಂತೇಳ್‌ಕನ ಅಂವನೇ ಕೈ ಬೀಸಿ ಕರ್ತ್... ಅಂವಂಗುನು ಹೇಳಿ ಬುಡೊಮೊ ಅಂತ ಅತ್ತ ಹೋದನೋ ಅಂವನೇ ಕತೆ ಹೇಳಿಕೆ ಸುರುಮಾಡ್ತ್.

ಎಲ್ಲವು : ಎಂತ ಕಥೆ.....

ದೋಚಯ್ಯ : ಯಾರೋ ಇಬ್ರೊಬ್ರು... ಟಿಪ್‌ಟಾಪ್ ಆಗಿ ಒಳೊಗಡ. ಲಾಡ್ಜ್‌ಗೆ ಬಂದ್ ಒಂದು ವಾರ ಆತ್‌ಗಡ. ಡೆಲ್ಲಿಂದ ಬಂದೋವು. ಎಡ್ವಾನ್ಸ್ ಕೇಳಿಕನ ನಾವು ರಾಷ್ಟ್ರಪತಿ ಭವನಲಿ ಇರ್ದು. ಅಲ್ಲಿಂದ ದುಡ್ಡ್ ಬಂದದೆ. ಹೋಕನ ಕೊಟ್ಟವೇಂತ ಹೇಳ್ಯೋಳೊಗಡ... ಅಷ್ಟೊತ್ತ್‌ಗೆ ಟಕ್..ಟಕ್.. ಅಂತ ಮೆಟ್ಲ್ ಇಳೆವ ಶಬ್ದ ಕೇಳ್ತ್... ಜತ್ತಪ್ಪಣ್ಣ 'ನೋಡಿ ಅವ್ವೇ... ಅವ್ವೇಂತೇಳ್ತ್'. ನೋಡ್ನೆ.. ಅವ್ವೆ... ಹೇಂಗೊಳೋ ಗೊತ್ತುಟ್ಟಾ...

ಮೇಯರ್ : ಹೇಂಗೊಳೊ......

ಬಾಚಯ್ಯ : ಥೇಟ್ ಆಫೀಸರ್ರೆ....... ಎಳ್ತ್ ಹುಡುಗರ್. ಬೆಳ್ಳಂಗೆ ಬೆಳ್ಳಂಗೆ ಕೋಲು ಸರೀರ... ಸಣ್ಣಕ್ಕೆ ಗಡ್ಡ. ಪ್ಯಾಂಟ್, ಇನ್‌ಸರ್ಟ್, ಬೆಲ್ಟ್...

ಸೂ... ಟಿಪ್‌ಟಾಪ್ ಹುಡುಗರ್... ಹಾಂಗೆ ಇಳ್ದ್ ಪ್ಯಾಂಟ್ ಕಿಸೆ ಒಳಗೆ ಕೈ ಹಾಕಂಡ್ ಆಚೊಮ್ಮೆ ಈಚೊಮ್ಮೆ ನೋಡ್ದೊ. ನನ್ನ ಹಕ್ಕಲೆ ಬಂದ್ ನನ್ನನೂ ನೋಡ್ದೊ... ಒಬ್ಸರ್ವೇಶನ್.. ನಂಗೆ ಕೂಡ್ಲೆ ತಲೆಗೆ ಹತ್ತಿತ್...

ದೋಚಯ್ಯ : ನಂಗೂ ಡೌಟು ಬಾತ್... ಸ್ವಲ್ಪ ಹೊತ್ತು ನಿತ್ತ್ ಮತ್ತೆ ಹೊರಗೆ ಹೋದೋ..... ಆಮೇಲೆ ಜತ್ತಪ್ಪಣ್ಣ ಮೆಲ್ಲ ಗುಟ್ಟು ಬುಟ್ಟತ್...

ಎಲ್ಲವು : ಎಂತಗುಟ್ಟು.

ಬಾಚಯ್ಯ : ಅದೇ.... ರಾಷ್ಟ್ರಪತಿ ಭವನಲಿ ಇರ್ದುಗಡ. ದೊಡ್ಡ ಆಫೀಸರ್‌ಗಡ, ಒಂದು ವಾರ ಇದ್ದ್ ಮತ್ತೆ ಬೇರೆ ಊರಿಗೆ ಹೋದವೆಗಡ.... ಒಂದ್ ಪೈಸೆ ಕೊಟ್ಟತ್ತ್‌ಲೆಗಡ. ಎಲ್ಲ ರೂಂಗೆ ಸಪ್ಲೈಗಡ. ಚಿಕನ್, ಪಕನ್ ಅದೂ ಇದೂ.... ಎಲ್ಲ ಬೇಕಡ.....ಥೇಟ್ ಆಫೀಸರ್ರೆ....

ದೋಚಯ್ಯ : ಸುರೂಗೆ ಅಂದಾಜ್ ಆದ್ ನಂಗೆ. ನಾನೇ ಇವ್ಕೆ ಹೇಳ್ದ್....

ಬಾಚಯ್ಯ : ಅದೆಂತದೂ ಇಲ್ಲೆ... ನಂಗೂ ಅಂದಾಜು ಆಗುಟು... ಒಂದ್ ವಾರ ಆತ್.... ಡೆಲ್ಲಿಂದ ಬಂದವು... ಬರುವ ವಾರ ಬೇರೆ ಊರ್‌ಗೆ ಹೋದವೆ. ಒಂದ್ ಪೈಸೆ ಕೊಟ್ಟತ್‌ಲೆ..... ರಾಷ್ಟ್ರಪತಿ ಭವನಂದ ದುಡ್ಡ್ ಬಂದದೆತ ಹೇಳಿಯೊಳು. ಅಷ್ಟ್ ಅಂದಾಜ್ ಆದುಲೆನಾ....

ಮೇಯರ್ : ಓ ದೇವಾ ಈಗೆಂತ ಮಾಡ್ದು.. ಒಟ್ಟಾರೆ ತಲೆಬೆಚ್ಚ ಆದೆ... ಎಂತದೂ ಅಂದಾಜಿ ಆದುಲೆ. ಈಗೇಂತ ಮಾಡ್ದು.... ಅವ್ವೇ ಆಗಿದ್ದರೆ... ಚೇ... ಎಲ್ಲಾ ಗೊತ್ತಾಗಿರ್ದು... ನಾ... ಹೇಳ್ದೆ ಸ್ವಲ್ಪ ಜಾಗ್ರತೆಂತ. ನಿಮ್ಮ ಸಾವು... ಸ್ವಲ್ಪ ಆಫೀಸ್‌ನ ಸರಿ ಇಸಿಕಣಿಕೆ ಸಂಕಟ ನೀವ್ಗೆ. ಈಗ ನೋಡಿ ಕುತ್ತಿಗೆಗೆ ಬಂದುಟು... ಚೇ... ನಂಗೆ ತಲೆ ಓಡ್ದುಲೆ... ಕೈ ಕಾಲ್ ನಡ್ಗಿದೆ. ಎಂತ ಮಾಡ್ದು ಈಗ.. ದೋಚಯ್ಯ ರೂಂ... ನಂಬ್ರ ಎಷ್ಟ್..

ದೋಚಯ್ಯ : 5

ಮೇಯರ್ : ಹಾಂ.... 5ನೇ ನಂಬರ್. ಯಸ್... ಯಸ್... ಈಗ ಕ್ಲಿಯರ್ ಆತ್... ಅವು ಬಂದ್ ಎಷ್ಟು ದಿನ ಆತ್...

ದೋಚಯ್ಯ : ಒಂದು ವಾರ........

ಮೇಯರ್ : ಓ... ಒಂದು ವಾರ... ಇದೇ ವಾರಲಿ ಅಲ್ಲ.. ನಿಮ್ಮ ಆಫೀಸ್‌ನ ಟೈಪಿಸ್ಟ್‌ನ ಗಲಾಟೆ. ರೇಪ್ ಎಟೆಂಪ್ಟ್. ಓ.... ಗುಡ್ಡಪ್ಪ... ಎಲ್ಲಿ ಒಳಯಾ..... ಛೇ.. ಒಟ್ಟಾರೆ ಗಡಿಬಿಡಿ ಆದೆ. ಕೈ ಕಾಲೇ ಆಡ್ದುಲೇ. ಥಕ್ ಏನಾನದೆನೋ... ಏನೋ.....

ಇಂಜಿನಿಯರ್ : ಸರ್... ಗಡಿಬಿಡಿ ಮಾಡ್ಬಡಿ... ಏನೂ ಆದುಲೆ. ಈಗ ನಾವೆಲ್ಲ ಸೇರಿ ಒಂದು ನಿಯೋಗ ಹೋಗಿ ಅವರ ಮಾತಾಡ್ಸಿರೆ ಹೇಂಗೆ... ಏನಾರೊಂದು ಗೊತ್ತಾದೆ...

ಮ್ಯಾಜಿಸ್ಟೇಟ್ : ನೋ... ನೋ... ಅದ್ಕೆಲ್ಲಾ... ಒಂದು ಪ್ರೋಟೋಕಾಲ್ ಉಟ್ಟು... ಹಾಂಗೆ ಎಲ್ಲೊವು ಸಂತೆಗೆ ಹೋದಂಗೆ ಹೋದು ಅಲ್ಲ. ಒಂದು ಕಾನೂನು, ಒಂದು ಶಿಸ್ತ್ ಉಟ್ಟು. ಎಲ್ಲೊವು ಹುಗ್‌ಬಡಿ. ಸುರ್‌ಗೆ ನಮ್ಮ ಮೇಯರ್, ಪ್ರಥಮ ಪ್ರಜೆ. ಆಮೇಲೆ ನಾ.. ಆಮೇಲೆ ನೀವೆಲ್ಲ ಒಬ್ಬೊಬ್ಬನೇ ಹೋಗಿ ಮಾತಾಡ್ಸೊಕು. ಹ್ಣಾಂ....

ಮೇಯರ್ : ಲುಕ್ ಹಿಯರ್.... ಯಾರೂ ಹೋದು ಬೇಡ... ನಾನೇ ಹೋನೆ, ಎಂತೆಂಥ ಸಿಚುವೇಷನ್ ಹ್ಯಾಂಡಲ್ ಮಾಡ್ತೆನಾ. ಇದೆಲ್ಲ ಯಾವ ಲೆಕ್ಕನಂಗೆ..

ಎಲ್ಲವೂ : ಮೇಯರ್ ಸಾಹೇಬ್ರಿಗೇ... ಜೈ.

ಮೇಯರ್ : ದೋಚಣ್ಣ ಬಾಚಣ್ಣ ಸಣ್ಣ ಪ್ರಾಯತೇಳ್ದರಿ ಅಲ

ಬಾಚಯ್ಯ : ಹೌದೌದು.. ಒಂದ್ 20–25 ವರ್ಷ.

ಮೇಯರ್ : ಸಣ್ಣ ಪ್ರಾಯದಂವ ಆದಕೆ ಬಚಾವ್. ತೊಂಡಮನಿ ಆಗಿದ್ದರೆ ಪಡ್ಚ..
ಲುಕ್ ಹಿಯರ್. ಎಲ್ಲವೂ ಈಗಲೇ ಹೊರ್ಡಿ ನಿಮ್ಮ ನಿಮ್ಮ ಕೆಲ್ಸ ಸುರು ಮಾಡಿ.. ಎಲ್ಲಿ ಸ ಅನುಮಾನ ಬಾರದಂಗೆ ನೋಡಿ ಕಣಿ. ಹುಂ.. ಹೊರ್ಡಿ.
(ಎಲ್ಲವೂ ಗುಣುಗುಣು ಹೇಳಿಕಂಡ್ ಹೊರ್ಟವೆ)

ಮೇಯರ್ : ಇಂಜಿನಿಯರ್ ಬೆಳ್ಳಿಯಪ್ಪ ನೀವು ಹಂಞ

ಇರಿ. ಹೇಳ್ದಂಗೆ ಆ ರೋಡೆಲ್ಲ ಗುಡ್ಸಿ ಕ್ಲೀನ್ ಮಾಡಿಕೆ ಹೇಳಿ. ಗುಂಡಿಗೆಲ್ಲ ಪೊಯ್ಯೆ ಹಾಕಿ ಲೆವೆಲ್ ಮಾಡಿ... ಸ್ವಲ್ಪ ಗೋಡೆಗಳಿಗೆ ಸುಣ್ಣ ಬಣ್ಣ.. ಮತ್ತೆ ಊರ್ಲಿ ಇರುವಎಲ್ಲಾ ಜೆಸಿಬಿಗ ಏನಾದರ್ ಒಂದ್ ಕೆಲ್ಸ ಮಾಡಿಕಂಡೇ ಇರೊಕು. ಗೊತ್ತಾತಲ.

ಇಂಜಿನಿಯರ್ : ಆದು ಸರ್.. ಮಾಡ್ಸಿನೆ

ಮೇಯರ್ : ಕಡ್ಡಿಯಪ್ಪಾ, ಏ ಕಡ್ಡಿಯಪ್ಪಾ..
(ನಿದ್ದೆ ತೂಗುತ್ತಿದ್ದ ಪೇದೆ ಗಡಿಬಿಡಿಯಿಂದ ಓಡಿ ಬಂದದೆ)

ಮೇಯರ್ : ಲುಕ್ ಹಿಯರ್... ಬೇಗ ಹೋಗಿ ಡ್ರೈವರ್‌ಗೆ ಹೇಳ್..... ಕಾರ್ ರೆಡಿ ಮಾಡಲಿ. ಆ ಸೀಟೆಲ್ಲ ಉಜ್ಜಿ ದೂಳು ಹೊಡ್ದ್ ಸ್ವಲ್ಪ ಲ್ಯಾಕ್ ಕಾಣುವಂಗೆ ಮಾಡೊಕೂಂತೇಳು.. ಹಂಗೆ ಇರುವ ಎಲ್ಲ ಇನ್ಸ್‌ಪೆಕ್ಟರ್‌ನ ಬಾಕೆ ಹೇಳ್.

ಮೇಯರ್ : ಏ ಗುಡ್ಡಪ್ಪ... ಹೋಗಿ ನನ್ನ ಕೋಟು ಪೇಟಾ ತಂಕಂಡ್ ಬಾ... ದೋಚಯ್ಯ ಪೋಯಾ...

ಬಾಚಯ್ಯ : ಸರ್... ನಾನು ಬನ್ನೆ

ಮೇಯರ್ : ಬೇಡ ಬೇಡ.... ಜಾಸ್ತಿ ಜನ ಬೇಡ. ವಾಪಾಸು ಬಾಕನ ಆಫೀಸರ್ ಬಾಕೆ ಇರ್ದ್ಲ... ಕಾರ್ಲಿ ಜಾಗ ಇರಿಕಿಲೆ

ಬಾಚಯ್ಯ : ಆದು ಆದು... ನನ್ನ ಸ್ಕೂಟರ್ ಉಟ್ಟು. ನಾ ಅದರ್ಲ ಬನ್ನೆ....

ಮೇಯರ್ : ಎಲ್ಲಿಟ್ಟು ಕೋಟು (ಗುಡ್ಡಪ್ಪ ತರುತ್ತಾನೆ) ಪೇಟ ಎಲ್ಲಿಟ್ಟು ಮಾರಾಯ... ನಿಂಗೆ ಸ ಸೀರಿಯಸ್‌ನೆಸ್ ಅರ್ಥ ಆದುಲೆ. (ಕೋಟು ಹಾಕಿಕಣ್ತಾ) ಬಾಚಣ್ಣ ನೀನು ಸುರೂಗೆ ಹೋಗಿ ಅಶ್ವಿನಿ ಲಾಡ್ಜ್ ಎದುರು ನನ್ನದೊಂದು ದೊಡ್ಡ ಕಟೌಟ್ ಹಾಕ್ಸ್. ರೂಂ ನಂ. 5ರಂದ ಲಾಯ್ಕ ಕಾಣಕು. ಗೊತ್ತಾತಲ.

ಬಾಚಯ್ಯ : ಆದು ಸರ್. ಅದೆಲ್ಲ ನಂಗೆ ಬುಡಿ.. ನಾ ನೋಡಿಕಣೆ..

(ಇನ್ಸ್‌ಪೆಕ್ಟರ್ ಒಳಗೆ ಬಂದದೆ)

ಮೇಯರ್ : ಎಲ್ಲಿ ಇದ್ದರಿ ಮಾರ್ರೆ ಇಷ್ಟೊತ್ತು

ಇನ್ಸ್‌ಪೆಕ್ಟರ್ : ಸಾರ್ ನಾ ಆಗಳೇ ಬಂದಳೆ... ಆಚೆ ಇದ್ದೆ...

ಮೇಯರ್ : ಎಂತ ಸಾವು ಮಾರಾಯ್ರೆ.. ಆಫೀಸರ್ ಬಂದೋಳೊ. ನೀವೆಂತ ಹೀಂಗೆ ದೂಂಗುದು. ಆ ನಿಮ್ಮ ಕಾನ್‌ಸ್ಟೇಬಲ್‌ನ ಕತೆ ಎಂತದ್?

ಇನ್ಸ್‌ಪೆಕ್ಟರ್ : ಅಂವ ಕಳ್ಳಬಟ್ಟಿ ಕೇಸ್‌ಗೆ ತ ಹಳ್ಳಿಕಡೆ ಹೋಗಿತ್ತ್ ಬಾಕನ ಸಮಾ ಏರ್ಸಿಕಂಡ್ ಬಂದುಟು. ರಗಳೆ ಬೇಡಾಂತ ಅವನ ಮನೆಗೆ ಕಳ್ಸಿಯಳೇ... ಎಲ್ಲ ಎಸ್.ಐಗೆ ಹೇಳ್ಯಾಳೆ. ಅಂವ ನೋಡಿಕಂಡದೆ. ನೀವ್ ಹೆದ್ರ್‌ಬಡಿ.....

ಮೇಯರ್ : ನಾನ್‌ಸೆನ್ಸ್. ಆಫಿಸರ್ ಬರ್ತಾ ಒಳೊ ನಿಮ್ಮ ಮಂಗನಾಟ ಮುಗಿಕಿಲೆ. ಸೆಕ್ಯುರಿಟಿ

ಎಲ್ಲ ಟ್ರೈಟ್ ಮಾಡಿ. ನಿಮ್ಮ ಕಾನ್‌ಸ್ಟೇಬಲ್ಸ್ ಮುಖ್ಯರಸ್ತೆಲಿ ಈ ವಯಸ್ಸಾದವರ, ಪಾಪದವರ ಕೈಹಿಡ್ಕಂಡ್ ಅತ್ತಿಂದಿತ್ತ, ಇತ್ತಂದ ಅತ್ತ ದಾಟಿಸಿಕಂಟೇ ಇರಕು, ಗೊತ್ತಾತಲ (ವಾಚು ನೋಡಿ ಪೇಟ ತಲೆಗಿಟ್ಟು ಹೊರಡುವರು)

ಇನ್ಸ್‌ಪೆಕ್ಟರ್ : ಸರ್.. ಪೇಟ ಹಿಂದೆ ಮುಂದೆ ಆತೋಂತ.

ಮೇಯರ್ : ಮೈಗಾಡ್...ಗಡಿಬಿಡಿಲಿ ಎಂತದೂ ಅರ್ಥ ಆದುಲೇ... (ಪೇಟ ಸರಿ ಇಟ್ಟು) ಈಗ ಸರಿ ಆತಾ... ಹ್ಞಾಂ.... ಹೊರ್ಡ್‌ಮೊ ಅಲ..

ಎಲ್ಲವು : ಪೋಯಿ....

(ಅವರೊಂದಿಗೆ ದೋಚಯ್ಯ, ಇನ್ಸ್‌ಪೆಕ್ಟರ್, ಇಂಜಿನಿಯರ್ ಮತ್ತು ಅಲ್ಲಿದ್ದವರೆಲ್ಲ ಅಮಸರಲಿ ಹೋದವೆ. ಮೇಯರ್ ಹೆಣ್ಣ್ ಕಾವೇರಿ ಮಗಳ್ ಮೋನಿಕಾ ಪ್ರವೇಶ)

ಕಾವೇರಿ : ಓಯ್... ಅವು ಇಲ್ಲಿನೂ ಇಲ್ಲೆ.... ಗುಡ್ಡಪ್ಪನೂ ಕಾಂಬುದುಲೆ... ಎಲ್ಲ ನಿನ್ನಂದಾನೆ ಆದ್. ಬೇಗ ಹೊರ್ಡುಂತೇಳ್ದೆ... ಸಿಂಗಾರ ಮಾಡಿಕೆ ಒಂದ್ ಗಂಟೆ. ಚೇ.... ಇವು ಎಲ್ಲಿ ಹೋದೋಪ್ಪ (ನೆನಪಿಸಿಕೊಳ್ಳುತ್ತಾ) ಹ್ಞಾಂ... ಆ ಆಫೀಸರ್‌ಮನಿ ಬಂದ್ ಬುಟ್ರೋನಾ ಹೇಂಗೆ. ಆ ಆಫೀಸರ್ ಹೇಂಗಿರುವೋ. ಜವ್ವಣನಾ... ಪ್ರಾಯದವೋ.... ಇವೊಬ್ಬ... ನಿಲ್ಲಿಕೆ.. ಕುದ್ರಿಕೆ ಪುರುಸೊತ್ತಿಲ್ಲೆ... ನಿನ್ನದೊಂದು ರೋಗ ಮುಗಿಕೂ ಇಲ್ಲ..

ಆ ಪೋಸ್ಟ್‌ಮಾಸ್ಟ್ರ ನೋಡ್‌ಕನ ನಿಂಗೆಂತ ಶುರುವಾದು. ರಗಳೆ ಚೇ.....ಆಫೀಸರ್‍್ನ ನೋಡಿಕೆ ನಾನೂ ಹೋಕಾತ್....

ಮೋನಿಕಾ : ಆಯ್ಯೋ.... ನಿನ್ನದೊಂದು ಎಂತ ಮಮ್ಮಿ.... ಊರಿಗೆ ಬಂದವ ನೀರಿಗೆ ಬರದಿರಿಕಿಲೆ. ಬಾಕನ ನೋಡೊಮ.

ಕಾವೇರಿ : (ಸೆಕ್ರೆಟರಿ ಬರ್‍ತಾನೆ) ಗುಡ್ಡಪ್ಪಾ.... ಎಂತಾತ್‌ಯಾ.... ಇವು ಎಲ್ಲಿ ಹೋದೋ....

ಗುಡ್ಡಪ್ಪ : ಅವು ಕಾರ್ ಹತ್ತಿ ಹೋದೋ....

ಕಾವೇರಿ : ಅದ್ ಗೊತ್ತಾತ್.... ನೀನೂ ಹೋಗು... ಅಲ್ಲಿಗೆ ಹೋಗಿ ವಿಷಯ ತಿಳ್ಕಂಡ್ ಬಾ... ಆಫೀಸರ್ ಜನ ಹೇಂಗೆ. ಯಾವ ಟೈಪು... ಹುಡುಗನಾ... ಪ್ರಾಯದವೋ.... ಹೇಂಗೊಳೋ... ಅಂತೆಲ್ಲಾ ತಿಳ್ಕಂಡ್ ಬಾ... ಮತ್ತೆ ಎಂಕು ಪಣಂಬೂರಿಗೆ ಹೋದಂಗೆ

ಮೋನಿಕ : ಕುಟ್ಟಿ ಕುಂದಾಪುರಕ್ಕೆ

ಕಾವೇರಿ : ತೋತಪ್ಪ ತಲವಾವೇರಿಗೆ ಹೋದಂಗೆ ಮಾಡ್ಬಡ.. ಗೊತ್ತಾತಾ!!!!!

**(ಬೆಳಕು ಕಡಿಮೆಯಾಗಿ ಕತ್ತಲು)**

# ಅಂಕ – 2

(ಹೋಟೆಲ್ ಕೋಣೆ ಮಂಚದಲ್ಲಿ ಹೊರಳಾಡುತ್ತಿರುವ ತಿವಾರಿ ಎದ್ದು ಕುದ್ದದೆ)

ತಿವಾರಿ : ದೇಖೊ.... ಭಾಯ್... ಇದೆಂತ ಊರುತ.. ಭಯಂಕರ ಹೊಟ್ಟೆ ಇಸಿದೆ. ಒಬ್ಬನೂ ಉಂಬಕೆ ಕರೆದುಲೆ. ಹೊಟ್ಟೆ ತಾಳ ಹಾಕಿದೆ. ಅದರ ಮೇಲೆ ನಮ್ಮ ಆಫೀಸರ್ದ್ ಒಂದು ಮರ್ಜಿ. ಡೆಲ್ಲಿಂದ ಹೊರ್ಡ್‌ಕನ ಹಂಞ ದುಡ್ಡಿತ್ತ್. ನಾಕ್ ದಿನ ತಿಂದೊ..ಕುಡ್ದೊ.. ಈಗ ಕೈ ಖಾಲಿ. ಯಾವ ಊರಿಗೆ ಹೋದರೂ ಇವ್ಕೆ ಫೈವ್‌ಸ್ಟಾರ್ ಹೋಟೇಲೆ ಆಕು. 'ಹೋಗ್‌ಯಾ ತಿವಾರಿ, ಹುಡ್ಕು ಒಳ್ಳೆ ಹೋಟೆಲ್‌ಂತೇಳ್ದೊ.... ನಂಗೆ ಸಿಕ್ಕಿದ್ ಈ ದರಿದ್ರ ಹೋಟೇಲ್. ಈ ಊರ್‌ಲಿ ಇಂತ ಹೋಟೇಲ್ ಸಿಕ್ಕುದೆ ದೊಡ್ಡದ್. ಒಂದು ರೂಮ್ ಮಾಡ್ದ್ ಒಂದೇ ಗೊತ್ತು. ಬಿರಿಯಾನಿ, ಕಬಾಬ್, ಸ್ಕಾಚ್, ಎಣ್ಣೆ ತರ್ಸಿದೋ, ತಿಂದೋ, ಕುಡ್ದೊ.. ನಾನು ಸರಿತಿಂದೆ. ಹೌದು ಇಷ್ಟೆಲ್ಲಾ ಖರ್ಚು ಮಾಡಿಕೆ ನಾವೇನು ರಾಷ್ಟ್ರಪತಿನಾ ಮಕ್ಕಳಾ? ನಮ್ಮ ಬಾಸ್ ರಾಷ್ಟ್ರಪತಿ ಭವನದ ಕೆಳಗಿನ ಆಫೀಸ್‌ಲಿ ಒಂದ್ ಕ್ಲರ್ಕ್. ನನ್ನ ಹಳೆ ದೋಸ್ತಿ... ಇದ್ದಕ್ಕಿದ್ದ ಹಾಂಗೆ ಮೊನ್ನೆ ರಜೆ

ಹಾಕಿ ಕರ್ತ್. ನಾ ಸೌತ್ ಇಂಡಿಯಾ ಟೂರ್ ಹೋಗ್‌ತ ಒಳೆ. ಅಫೀಷಿಯಲ್ ಟೂರ್. ನಂಗೊಂದು ಸೆಕ್ರಟರಿ ಬೇಕು. ನೀ ಬಂದ್ಯನಾಂತ ಕೇಳ್ತ್. ಖರ್ಚೆಲ್ಲಾ ನಂದೇಂತೇಂತ ಹೇಳ್ತ್. ನಂಗೂ ರಾಜಧಾನಿ ಬೇಜಾರ್ ಆಗಿತ್ತಾ... ನಾನೂ ಹೊರ್ಟೆ.
(ಮುಂದೆ ಬಂದು ಕೂರುತ್ತಾನೆ)
ಇಂವ ಜನ ತೊಂದರೆ ಇಲ್ಲೆ. ಹೋದಲ್ಲೆಲ್ಲ ದಿಲ್‌ದಾರ್ ದೋಸ್ತಿಗ. ಉಂಬೊದೇನ್.. ತಿಂಬೊದೇನ್.. ಇಸ್ಪೀಟ್ ಆಡಿಕೆನೂ ಹೋದೆ. ಒಮ್ಮೊಮ್ಮೆ ಸಿಕ್ಕಿದೆ. ಒಮ್ಮೊಮ್ಮೆ ಕೈ ಖಾಲಿ. ಜನ ಭಯಂಕರ. ಒಂದೊಂದು ಊರ್‌ಲಿ ಒಂದೊಂದು ಆಟ ಆಡಿ ಹೇಂಗಾರ್ ಮಾಡಿ ದುಡ್ಡು ಮಾಡ್ದೆ. ಎಸ್ಟ್ ದಿನಾಂತ ಡೋಂಗಿ ಮಾಡಿ ಬದ್ಕ್‌ಕ್... ಇಲ್ಲಿಗೆ ಬಂದು ಒಂದು ವಾರ ಆತ್. ಒಂದ್ ಪೈಸೆ ಇಲ್ಲೆ. ಹೋಟೆಲ್‌ನವ್‌ಕೂ ಅಂದಾಜು ಆಗುಟು. ದುಡ್ಡು ಕೊಡಿ. ಇಲ್ಲದಿದ್ದರೆ ರೂಂ ಖಾಲಿ ಮಾಡಿ ಅಂತ ಸುರು ಮಾಡ್ಯೊಳೊ. ಸುರು ಸುರುಗೆ ಅವ್ಕೆ ಅಂದಾಜಿ ಆಗದಂತೆ ದೊಡ್ಡ ಆಫೀಸರ್, ರಾಷ್ಟ್ರಪತಿ ಭವನಂತೇಳಿ ಎಜೆಸ್ಟ್ ಮಾಡ್ದೊ. ಇನ್ನ್ ಹಂಞ ಬಂಙ ಉಟ್ಟು. ಎಂತಾದೆನೋ.... ಮುಸುಂಡಿಗೆ ಇಸಿ ಹೊರಗೆ ಹಾಕದಿದ್ದರೆ ಸಾಕ್...
ಹೌದು... ಹೊಟ್ಟೆ ಒಳಗೆ ಚುರುಚುರು

ಸುರು ಆಗುಟು. ಕೈಲಿ ಎಂಟಾಣೆನೂ ಇಲ್ಲೆ. ಹೋಟೆಲ್‌ನವು ದುಡ್ಡು ಕೊಡದಿದ್ದರೆ ಎಂತಾರೂ ಕೊಡ್ದುಲೆಂತ್ ಕೆಪ್ಪೆಗೆ ಹೊಡ್ದಂಗೆ ಹೇಳ್ಯೊಳೊ... ನಮ್ಮ ಬಾಸ್‌ನೊಟ್ಟಿಗೆ ಕೇಳ್ರೆ.. ಸ್ವಲ್ಪ ತಡ್ಕಯಾ. ಇಷ್ಟ್ ದಿನ ನಡ್ತ್‌ಲೆನಾ... ಅದೃಷ್ಟ ಇದ್ದರೆ ಏನಾದರೊಂದು ಆದೆಂತ ಹೇಳ್ವೆ. ಎಂತಾದೆನೋ ದೇವ್ರಿಗೆ ಗೊತ್ತು..
ಈ ಹೋಟೆಲ್‌ನವಾದ್ರೂ ಎಷ್ಟ್ ದಿನಾಂತ ಧರ್ಮಕ್ಕೆ ಕೊಡುವೊ... ಕುಡೆಕೆ ಬುಡಿ, ತಿಂಬುಕೆನೂ ಇಲ್ಲೆ. (ಹೊರಗೆ ನೋಡಿ) ಹಾಂ ಯಾರೋ ಬಂದೊ... ಹೊಟೇಲ್ ಮ್ಯಾನೇಜರೋಂತ. ದುಡ್ಡ್ ಕೇಳಿಕೆ ಬಾತ್ ಕಂಡಡೆ. ಇಂವ ಇಸುದುಲೆ. (ಎಂದು ಹೇಳಿ ಮಂಚದ ಕೆಳಗೆ ಅಡಗುತ್ತಾನೆ. ಆಗ ಸಕ್ಸೇನಾ ಪ್ರವೇಶ) ಓ... ಇದ್ ನಮ್ಮ ಬಾಸ್.

ಸಕ್ಸೇನಾ : ಏಯ್... ತಿವಾರಿ. ತಕಾ (ಟೋಪಿ ತೆಗೆದುಕೊಡುತ್ತಾನೆ) ಹಾಂ.. ಕೋಟು ಬಿಚ್ಚು. (ಬಿಚ್ಚುತ್ತಾನೆ) ಏನ್ ಮಾಡ್ತಿದ್ದೆ (ಹಾಸಿಗೆ ನೋಡಿ) ಹಾಸಿಗೆ ಹತ್ತಿ ಕುಣಿತಿದ್ದನಾ ಹೇಂಗೆ.

ತಿವಾರಿ : ನಂಗೆ ಬೇರೆ ಕೆಲ್ಸ ಇಲ್ಲೆನಾ... ನಿಮ್ಮ ಹಾಸಿಗೆ ಮೇಲೆ ನಾ ಯಾಕೆ ಕುಣಿಯೊಕು. ನಾ... ಏನ್ ಹಾಸಿಗೆನೇ ನೋಡ್ತ್‌ಲೆನಾ....

ಸಕ್ಸೇನಾ : ಸುಳ್ಳು ಬೊಗಳ್‌ಬೇಡ. ಹಾಸಿಗೆ ಇಡೀ ಮುದ್ದೆ ಮುದ್ದೆ ಆಗುಟು.

ತಿವಾರಿ : ಬಾಸ್.. ಅದೆಲ್ಲ ಬುಡಿ.. ಈಗ ಹೊಟ್ಟೆಗೆಂತ...

ಸಕ್ಸೇನಾ : ತಿವಾರಿ..... ನನ್ನ ಸೂಟ್‌ಕೇಸ್‌ಲಿ ಸಿಗರೇಟ್ ಉಟ್ಟಾ ನೋಡು...

ತಿವಾರಿ : ಹೊರಗೆ ಬಿದ್ದಿದ್ದ ಸಿಗರೇಟ್ ತುಂಡುಗಳ ಹೆರ್ಕಿ ತಂದ್ ಕಾಗದ ಸುತ್ತಿ ಎಳ್ದ್ ಮುಗ್ಗಿ ಆಗುಟಲ್ಲ. ಇನ್ನೆಲ್ಲಿಂದ ಸಿಗರೇಟ್..

ಸಕ್ಸೇನಾ : ದೇಖೋ.... ಒಂದ್ ಕೆಲ್ಸ ಮಾಡ್.

ತಿವಾರಿ : ಎಂತ ಬಾಸ್..

ಸಕ್ಸೇನಾ : ಸೀದಾ ಕೆಳಗೆ ಹೋಗ್...

ತಿವಾರಿ : ಸೀದಾ ಹೋಗಿ.....

ಸಕ್ಸೇನಾ : ಹೋಟೆಲ್ ಮ್ಯಾನೇಜರ್‌ನ ಕರ್ದ್. ಒಂದ್ ಊಟ ಕಳ್ಸಿಕೆ ಹೇಳ್ದೆಂತ ಹೇಳ್....

ತಿವಾರಿ : ಮುಸುಂಡಿಗೆ ಬೀಳ್ದು.

ಸಕ್ಸೇನಾ : ತಿವಾರಿ.... ಹೇಳಿದಷ್ಟ್ ಮಾಡ್. ಅಧಿಕಪ್ರಸಂಗ ಬೇಡ.

ತಿವಾರಿ : ಅಧಿಕಪ್ರಸಂಗ ಅಲ್ಲ. ಪ್ರಯೋಜನ ಇಲ್ಲೆಂತ ಹೇಳ್ದ್. ಊಟ ಕೊಡ್ದುಲೇಂತ ನಿನ್ನೆನೇ ಹೇಳ್ಯೋಳೋ ಅಲ್ಲ.

ಸಕ್ಸೇನಾ : ಅರೆ ಹರಮ್‌ಕೋರ... ಹೋದ್ಯನಾ ಇಲ್ಲೆ ನಾ.....

ತಿವಾರಿ : ಬಾಸ್.. ನಿನ್ನೆನೇ ಅವ್ಕೆ ಧಮ್ಮಯ್ಯ ಹಾಕಳೆ. ಇಂದ್ ದುಡ್ಡ್ ಬಂದದೇಂತ ಲೊಟ್ಟೆ ಹೇಳ್ಯೋಳೆ. ಇವ್ಕೆ ಅಂದಾಜ್ ಆಗುಟು. ಆ ಮ್ಯಾನೇಜರ್ 'ನಾವ್ಗೆ ಎಂತ ಗೊತ್ತಾದುಲೆಂತ ಗ್ರೇಸಿಯಳರಿಯಾ' (ಗ್ರಹಿಸಿದ್ದೀರಾ)

ಬೇಕೂಪ... ನೀನು ನಿನ್ನ ಆ ಬಾಸ್‌ನೂ ಬರೇ ಫೋರ್‌ಟ್ವೆಂಟಿಗಾ. ದಗಲ್‌ಬಾಜಿಗ... ಬೇವರ್ಸಿಗ ಅಂತೆಲ್ಲ... ಬೊಯ್ತ್... ನಿಮ್ಮಂಥ ಘಟಿಂಗರ ನಾ ಬೇಕಾದಸ್ಟ್... ನೋಡ್ಯಳೇಂತೇಳ್ತ್ (ನೋಡ್ಯಳೆ ಅಂತ ಹೇಳ್ತ್) ಒಂದು ದಿನ ಕಾದನೆ. ದುಡ್ಡ್ ಬಾರದಿದ್ದರೆ ಇನ್ಸ್‌ಪೆಕ್ಟರ್‌ರಿಗೆ ಹೇಳಿ ಒಳಗೆ ಹಾಕ್ಸನೆ. ಕೋಳ ಹಾಕ್ಸಿ ಜೈಲಿಗೆ ಹಾಕ್ಸನೆ. ಏರೋಪ್ಲೇನ್ ಹತ್ಸನೆ. ಅಷ್ಟ್ ಮಾಡದಿದ್ರೆ ನಾ... ಮ್ಯಾನೇಜರ್ ಅಲ್ಲಂತ ಹೇಳಿಟು.. ನಂಗೆ ಪ್ಯಾಂಟ್‌ಲೇ ಉಚ್ಚೆ ಬಂದಂಗಾತ್...

ಸಕ್ಸೇನಾ : ಓಹೋ.... ಅಂವ ನಂಗೆ ಬೊಯ್ತ್‌ಂತ ನಿಂಗೆ ಬಾರಿ ಖುಷಿ ಆತಲ್ಲ.... ಬದ್ಮಾಷ್....

ತಿವಾರಿ : ಅಷ್ಟೆ ಅಲ್ಲ.... ನಿಮ್ಮಂತ ಬೇವರ್ಸಿಗಳಿಗೆ ಗಂಜಿ ಕೊಡಿಕೆ ಇದು ಧರ್ಮಚತ್ರ ಅಲ್ಲ. ಮರ್ಯಾದಿಲಿ ದುಡ್ಡ್ ಕೊಟ್ಟ್ ಜಾಗ ಖಾಲಿ ಮಾಡಿ. ಇಲ್ಲದಿದ್ದರೆ ಮೇಯರ್‌ಗೆ ಹೇಳಿ ನಿಮ್ಮ ಜೈಲಿಗೆ ಹಾಕಿಸಿನೆತ ಹೇಳ್ತ್.

ಸಕ್ಸೇನಾ : ಹೇಳ್‌ಲಿ ಬುಡು. ಈಗ ಅವನ ಕಾಲ... ಹೇಳದೆ ಬುಟ್ಟದೆನಾ.... ಈಗ ಹೋಗಿ ಅವನೊಟ್ಟಿಗೆ ಒಂದ್ ಊಟ ಕಳ್ಸಿಕೆ ಹೇಳ್.

ತಿವಾರಿ : ನಾ ಹೋಗಿ ಅವನನ್ನೆ ಕರ್ಕಂಡ್ ಬನ್ನೆ...

ಸಕ್ಸೇನಾ : ಆಂ.. ಅವನ ಯಾಕೆ ಕರ್ಕಂಡ್ ಬಾದು. ಅದ್ ಬೇಡ.... ನನ್ನ ಸಿಕ್ಕಿಸಿ ಹಾಕ್ಯನ. ಬದ್ಮಾಷ್... ನೀ ಯಾಕೆ ಸೆಕ್ರಟರಿತ ಇರ್ದು...

ಮರ್ಯಾದೆಲಿ ಹೋಗಿ ಊಟ ತರ್ಸ್....

ತಿವಾರಿ : ಬಾಸ್... ಮತ್ತೆ ಮತ್ತೆ ಹಾಂಗೆಲ್ಲ ಬ್ಯೊದರೆ ನಾ ಸುಮ್ಮನೆ ಇರಿಕಿಲೆ. ಕಡ್ಡಿ ಮುರ್ದಂಗೆ ಇದ್ದ ವಿಷಯ ಹೇಳಿ ನಾ.. ಹೊರ್ಟು... ಹೋವೆ.

ಸಕ್ಸೇನಾ : ಓ...ಓ..ಓ.. ಮಾರಾಯ ಇನ್ನ್ ಹಾಂಗೆಲ್ಲ ಬೊಯ್ಯಕಿಲೆ. ಒಮ್ಮೆ ಹೋಗಿ ಒಂದ್‌ಊಟದ ವ್ಯವಸ್ಥೆ ಮಾಡ್. ಅದ್‌ಆಗದಿದ್ದರೆ ಅವನ ಬಾಕೆ ಹೇಳ್.

(ತಿವಾರಿ ಹೋಗ್ತಾನೆ)

ಸಕ್ಸೇನಾ : ಅಬ್ಬ.... ಎಂತ ಬೇಕಾರ್ ತಡ್ಕಣಕ್... ಯಾರದರೂ ಎರ್ಡ್ ಇಸಿರೂ ಸಹಿಸಿ ಕಣಕ್. ಆದರೆ ಈ ಹೊಟ್ಟೆ ಹಸಿಯೋದರ ಮಾತ್ರ ತಡ್ಕಂಕೆ ಬೊತ್ತಪ್ಪ. ಈ ಹಸಿವೆ ತಡ್ಕಂಕೆ ಆದುಲೇಂತ ವಾಕಿಂಗ್ ಹೋದೆ. ಈಗ ಒಂದಕ್ಕೆ ಎರಡ್ ಆಗುಟು. ಡಬ್ಬಲ್ ಹಸಿವೆ.. ಈ ಇಸ್ಪೀಟ್‌ನ ಮರ್ಲ್ ಇಲ್ಲದಿದ್ರರೆ ಹೀಂಗಾಕಿತ್ತ್‌ಲೆ. ಮೊನ್ನೆ ಕ್ಲಬ್‌ಲಿ ಯಾರೋ ಒಬ್ಬ ಹರಾಮ್‌ಕೋರನೊಟ್ಟಿಗೆ ನಡುರಾತ್ರೆ ಮುಟ್ಟ ಆಡಿಕಂಡೆ ಕುದ್ದದೇ ತಪ್ಪಾತ್. ಜೋಬು ಖಾಲಿ ಆಕನನೇ ಗೊತ್ತಾದ್. ಆಚೆ ಊರ್‌ಲಿ ಹಂಞ ದುಡ್ಡ್ ಸಿಕ್ಕಿತ್‌ಂತ ಇಲ್ಲಿ ಬಂದ್ ಆಡ್ದೆ. ಪೂರಾ ಹೋತ್. ಒಂದ್ ಹಂಞ ಒಳ್ದಿದ್ದರೂ ಏನಾರ್ ಮಾಡಿ ಅವನ ಸೋಲ್ಸಿ ಬುಡ್ತಿದ್ದೆ. ಖಾಲಿಯಾದ್ ಗೊತ್ತೇ

ಆತ್ಲೆ. ಸುಡುಗಾಡ್ ಎಣ್ಣೆ ಪ್ರಭಾವ.
(ತಿವಾರಿ ಮತ್ತು ಹೊಟೇಲ್ ಮಾಣಿ)

ಮಾಣಿ : ಸರ್, ಮ್ಯಾನೇಜರ್ ನಿಮ್ಮ ಕರ್ಕಂಡ್ ಬಾಕೆ ಹೇಳ್ದೊ...

ಸಕ್ಸೇನಾ : ಓಹೋಹೋ.... ಮುನ್ನಾ ಹೇಂಗೊಳ.. ನಿನ್ನೆಂದ ನೀ ಕಾಂಬಕೇ ಇಲ್ಲೆ...

ಮಾಣಿ : ಸಾರ್ ನೀವು ಬರಕಡ.... ಮ್ಯಾನೇಜರ್ ಹೇಳ್ದೊ...

ಸಕ್ಸೇನಾ : ನೀ ತುಂಬ ಒಳ್ಳೆ ಹೈದ ಅಲ್ಲ. ನಿನ್ನಂತೋವು ಕೆಲ್ಸಕ್ಕೆ ಸಿಕ್ಕುದೇ ಭಾರಿ ಕಮ್ಮಿ. ಹೇಳ್ದಾಂಗೆ ನಿಂಗೆ ಎಷ್ಟ್ ಸಂಬಳ ಕೊಟ್ಟವೆಯಾ...

ಮಾಣಿ : ಅದೆಲ್ಲ... ನಂಗೆ ಗೊತ್ತಿಲ್ಲೆ... ನನ್ನ ಅಪ್ಪ ಆಗಾಗ ಬಂದ್ ತಕಂಡ್ ಹೋದವೆ...

ಸಕ್ಸೇನಾ : ಹಂಗೆಲ್ಲ ಮುನ್ನ.... ನೀ ಎಷ್ಟ್ ಕೆಲ್ಸ ಮಾಡಿಯಾ... ಅವು ಅದೂ ಇದೂಂತ ಕತೆ ಹೇಳಿ ಚಿಲ್ಲರೆ ಸಂಬಳ ಕೊಟ್ಟರೆ ಎಲ್ಲಿಗೆ ಸಾಕಾದೆ......

ಮಾಣಿ : ಸಾರ್..... ಮ್ಯಾನೇಜರ್.....

ಸಕ್ಸೇನಾ : ಹ್ಹಾಂ..... ನಿಮ್ಮ ಮ್ಯಾನೇಜರ್... ಇಂದ್ ಊಟ ಕಳ್ಸಿಕೆ ಮರ್ತ್ ಬುಟ್ಟುಳೋ.... ಪಾಪ ಕೆಲಸದ ಗಡಿಬಿಡಿ. ಮರ್ತ್ ಹೋಗುಟು.... ತೊಂದರೆ ಇಲ್ಲೆ. ಬೇಗ ಹೋಗಿ ಒಂದ್ ಊಟ ತಕಂಡ್ ಬಾ... ಆತಾ....

ಮಾಣಿ : ಅದ್.... ಮ್ಯಾನೇಜರ್.....

ಸಕ್ಸೇನಾ : ಮ್ಯಾನೇಜರ್‌ಗೆ ಎಂತಾತ್...

ಮಾಣಿ : ನಿಮ್ಮ ಕರೀ ಅಂತ ಹೇಳ್ಯೊಳೊ...

ಸಕ್ಸೇನಾ : ಹ್ಣಂ.. ಹ್ಣಂ... ಊಟ ಮಾಡಿ ಬನ್ನೇಂತೇಳ್

ಮಾಣಿ : ಫಸ್ಟ್ ನೀವ್ ಬರಕಡ. ಮತ್ತೆ ಊಟ ....

ಸಕ್ಸೇನಾ : ಎಂತ ಸಾವು ಮಾರಾಯ. ಇಲ್ಲಿ ಹೊಟ್ಟೆ ಇಸಿ ಸಾಯ್ತಾ ಒಳೆ. ನಿನ್ನ ಮ್ಯಾನೇಜರ್‌ಗೆ ಹೇಳ್.. ಸಾಹೇಬ್ರ್ ಬಂದವೆಗಡ.. ಊಟ ಮಾಡಿಕೂಡ್ಲೆ ಬಂದವೆ... ಈಗ ಆರ್ಜಂಟ್ ಊಟ ಕಳ್ಸಿಕೆ ಹೇಳ್ಯೊಳೋ ಅಂತ ಹೇಳ್.. ಹೋಗ್.

(ಮಾಣಿ ಹೋಗುವುದಿಲ್ಲ.. ಗದರಿಸಿ ಕಳಿಸುತ್ತಾನೆ)

ಸಕ್ಸೇನಾ : (ಸ್ವಗತ) ಚೇ..... ಇಂವ ಊಟ ತಾರದೇ ಇದ್ದರೆ ಎಂತ ಮಾಡ್ದು. ನಮ್ಮ ಊರೇ ಲಾಯ್ಕ ಇತ್ತ್. ನಾಲ್ಕ್ ಮಾಳಿಗೆನ ಆಫೀಸ್. ಮೂರನೇ ಮಾಳಿಗೆಲಿ 23ನೇ ಕೋಣೆ. ಹಕ್ಕಲೆ ದೊಡ್ಡ ಮೇಜು. ಅದರ ಮೇಲೆ ನೇಮ್ ಪ್ಲೇಟ್. ಪಿ.ಕೆ ಸಕ್ಸೇನಾ ಬಿ.ಎ, ಬಿ.ಎಲ್. ಅಂತ. ಅಲ್ಲಿ ಕುದ್ದ್‌ಕಂಡ ಬೇಕಾಕನ ಊಟ ತಿಂಡಿ ತರ್ಸಿ ತಿಂಬ ಗಮ್ಮತೇ ಬೇರೆ... ಚೇ.... ಇಲ್ಲಿ ದಮ್ಮಯ್ಯ ಹಾಕುವಾಂಗೆ ಆತಲ್ಲಾಂತ.

(ತಿವಾರಿ ಬರುತ್ತಾನೆ)

ಸಕ್ಸೇನಾ : ಎಂತಾತ್‌ಯಾ...

ತಿವಾರಿ : ಊಟ ಬಾತ್.. ಊಟ ಬಾತ್

ಸಕ್ಸೇನಾ : ಗುಡ್... ಗುಡ್.... ಅಬ್ಬ ಬಚಾವಾದೆ...

(ಊಟದ ತಟ್ಟೆಯೊಂದಿಗೆ ಮಾಣಿ ಪ್ರವೇಶ)

ಮಾಣಿ : ಮ್ಯಾನೇಜರ್ ಹೇಳ್ಯೋಳೊ.. ಇದೇ ಲಾಸ್ಟ್ ಊಟಂತ ಹೇಳಿ ಬುಡುಂತ...

ಸಕ್ಸೇನಾ : ಎಂತ ಸತ್ತ ಮ್ಯಾನೇಜರ್‌ಯಾ... ಅಂವ ಒಂದ್ ಮನ್ಶ ನಾ.... ನಿನ್ನಂಥ ಪಾಪದ ಮಕ್ಕಳಿಗೆ ಸಂಬಳ ಕೊಡದೇ ಕತ್ತೆನಂಗೆ ಗೈಯ್ಸಿದೆ ಅಲ್ಲ. ಅಂವಗೆ ದೆವ್ವ ಮೆಟ್ಟಿಕೆ... ಹ್ಞಾಂ ಗೈಪ್‌ಎಂತ ಮಾರಾಯಾ

ಮಾಣಿ : ಸಾರು.. ಬರೇ ಸಾರು...

ಸಕ್ಸೇನಾ : ಬರೇ ಅನ್ನ ಸಾರು (ಹುಗ್ಗಿ ಸಾರ್)

ಮಾಣಿ : ಹೌದು.. ಬರೇ ಹುಗ್ಗಿ.. ಸಾರು.

ಸಕ್ಸೇನಾ : ಎಂತ ಪಲ್ಯ ಇಲ್ಲೆನಾ... ಹಪ್ಪಳ ಉಪ್ಪಿನಕಾಯಿ...

ಮಾಣಿ : ಎಲ್ಲ ಉಟ್ಟು.. ನೀವ್ಗೆ ಕೊಡ್ಬಡಿಂತೇಳ್ದೊ..

ಸಕ್ಸೇನಾ : ಮತ್ತೆ ಹಪ್ಪಳ

ಮಾಣಿ : ಅದ್ ಇತ್ತ್. ಅದರ ಇವ್,... (ತಿವಾರಿ ಕಡೆ ನೋಡ್ದೆ, ತಿವಾರಿ ಮೋರೆ ಪೂಜಿಕಂಡದೆ)

ಸಕ್ಸೆನಾ : ತಿಂಡಿ ಗಿಂಡಿ ಎಂತ ಇಲ್ಲೆನಾ

ಮಾಣಿ : ಇಲ್ಲೇಂತಲ್ಲ.. ನೀವ್ಗೆ ಕೊಡ್‌ಬಡಾಂತ ಹೇಳ್ದೊ.

ಸಕ್ಸೇನಾ : ಹೌದಾ... ನಾ ಯಾರ್‌ಂತ ಅವಂಗೆ ಗೊತ್ತಿಲ್ಲ.. ಗೊತ್ತು ಮಾಡ್ನೆ... ಆಗ ಅವನ ಸನಿ ಬುಡ್ಸಿನೆ. (ಸಾರು ನೋಡಿ) ಇದೆಂತ ಮಾರಾಯ... ಸಾರೋ ಅಲ್ಲ ಪಾತ್ರೆ ತೊಳ್ದ ನೀರೋ...

ಮಾಣಿ : ಅದು ಸಾರೇ ಸಾರ್.... ಮ್ಯಾನೇಜರ್ ಹೇಳ್ಯೊಳೊ.... ಏನಾರ್ ಕಿರಿಕಿರಿ ಮಾಡ್ರೆ ಬಂದ್ ಹೇಳ್ಂತ.

ಸಕ್ಸೇನಾ : ಆತ್ ಮಾರಾಯ... ನೀ ಒಮ್ಮೆ ಹೋಗ್ (ಹೋಗುತ್ತಾನೆ) ಈ ದರಿದ್ರ ಸಪ್ಲೆಯರ್‌ಗ ಬಾರಿ ಜೋರು ಒಳೊ... ಇವ್ಕೆ ಸಂಬಳ ಅಲ್ಲ.. ಒಳ್ದದರ ತಿಂದ್ ತಿಂದ್ ಚರ್ಬಿ ತುಂಬಿಟು.. ಹಾಳಾದವು.. ಹಾಂಕಾರ... (ಊಟದಲ್ಲಿ ತೊಡಗುತ್ತಾನೆ. ತಿವಾರಿ ಬರ್‍ತಾನೆ)

ತಿವಾರಿ : ಸಾಬ್.... ಮೇಯರ್ ಸಾಬ್ ಬಂದೊಳೊ.. ನಿಮ್ಮನ್ನ ನೋಡಿಕೆ... ಈ ಊರ್‌ನ....

ಸಕ್ಸೇನಾ : ಮೇಯರ್...... ಈ ಊರ್‌ನ ಮೇಯರ್. ಆ ಬದ್ಮಾಷ್ ಮ್ಯಾನೇಜರ್ ಕಂಪ್ಲೆಂಟ್ ಕೊಟ್ಟಿರೊಕು.. ಲಗಾಡಿ ಹೋತ್... ನಮ್ಮ ಕಥೆ ಮುಗ್ತ್.. ಇನ್ನ್ ಜೈಲೇ ಗತಿ.. ಓ ಗಾಡ್....

ತಿವಾರಿ : ಅಲ್ಲಿ ಏರೋಪ್ಲೇನ್ ಹತ್ತ್‌ಸುವೆ. ಹೇಳ್‌ದೆ... ವಿಮಾನ ಹತ್ತಿ ಡೆಲ್ಲಿಗೆ ಪೋಯೀಂತ. ಈಗ ಇಲ್ಲೇ ಹತ್ತಿಕಾತಲ್ಲ....

ಸಕ್ಸೇನಾ : ನಾನ್‌ಸೆನ್ಸ್.. ಈ ಸಕ್ಸೇನಾಂತೇಳ್ರೆ ಏನ್‌ಂತ ತಿಳ್ಕೊಂಡೊಳೊ.... ಬರ್‍ಲಿ ಅಂವ. ಯಾವ ಮೇಯರ್ ನಾನೂ ನೋಡ್ನೆ...

(ಬಾಗಿಲು ತೆರೆಯುತ್ತದೆ. ಮೇಯರ್, ದೋಚಯ್ಯ ಪ್ರವೇಶ. ಸಕ್ಸೇನಾ ಮರೆಯಲ್ಲಿ ನಿಂತುಕೊಳ್ಳುತ್ತಾನೆ. ಕೈ ನೆಕ್ಕುತ್ತಾ)

ಮೇಯರ್ : (ತಿವಾರಿಯನ್ನು ನೋಡಿ) ನಮಸ್ಕಾರ ಖಾವಂದರಿಗೆ.. (ತಿವಾರಿ ಆಕಡೆ ಇಕಡೆ ನೋಡುತ್ತಾನೆ. ನಿಧಾನವಾಗಿ ಸಕ್ಸೇನಾ ಹೊರ ಹೋಗುತ್ತಾನೆ)

ದೋಚಯ್ಯ : ಇಂವ ಅಲ್ಲ.. ಅವು... ಅವು ... (ಸಕ್ಸೇನಾನನ್ನು ತೋರಿಸಿ)

ಮೇಯರ್ : ನಮಸ್ಕಾರ ಖಾವಂದರಿಗೆ...

ಸಕ್ಸೇನಾ : (ಮುಖ ಕೊಡದೇ) ನೀವೇನಾ ಮೇಯರ್...

ಮೇಯರ್ : ದಯಮಾಡಿ ಕ್ಷಮಿಸೋಕು.. ತಪ್ಪು ತಿಳಿಬಡಿ...

ಸಕ್ಸೇನಾ : ಅರೆ... ತಪ್ಪು.. ಎಂತ ತಪ್ಪು... ನಾವು ಅಂತ ದೊಡ್ಡ ಅಪರಾಧ ಎಂತ ಮಾಡ್ಯೊಳೊ.... ಹ್ಹಾಂ....

ಮೇಯರ್ : ಚೇ... ಚೇ.... ನೀವು ದೊಡ್ಡವು... ನೀವ್ಗೆ ಎಂತ ಬೇಕರೂ ಮಾಡುವಷ್ಟು ಶಕ್ತಿ ಉಟ್ಟು. ಆದರೂ ನೀವ್ಗೆ ಕರುಣೆ ಉಟ್ಟು. ಅದ್ ನಿಮ್ಮ ನೋಡ್ಕನನೇ ಗೊತ್ತಾದೆ. ಆದರೂ ಎಂತ ಮಾಡ್ದು. ನಾ... ಮೇಯರ್ ಆಗಿ ನಂಗೆ ಜವಾಬ್ದಾರಿ ಉಟ್ಟಲ್ಲ... ಅದ್ ನನ್ನ ಕರ್ತವ್ಯ. ಊರ್‌ನ ಹೊಟೇಲ್ ಹೆಂಗೆ ನಡೆತ ಉಟ್ಟುಂತ ಇನ್ಸ್‌ಪೆಕ್ಷನ್.. ಆಗಾಗ ಮಾಡಕಾದೆ... ನಾವು ಅದರ್ಲಿ ಬಾರಿ ಖಡಕ್. ಏನಾದ್ರೂ ತೊಂದರೆ ತರಲೆ ಆದರೆ ಸರಿ ಮಾಡುದು ನಮ್ಮ ಕರ್ತವ್ಯ ನೋಡಿ. ಹಾಂಗೆ ಖಾವಂದರಿಗೆ ಏನಾದ್ರೂ

ತೊಂದರೆ ಆತ್ಲೆ ಅಲ್ಲ.....

ಸಕ್ಸೇನಾ : (ಗಾಬರಿ) ತೊಂದರೆ ಯಾರ್‌ಂದ? ನಾವು.. ಇಲ್ಲೆಪ್ಪಾ ನಾವು ಯಾರಿಗೂ ತೊಂದರೆ ಮಾಡ್‌ತ್ಲೆ... ತೊಂದರೆ ತಕರಾರು ಯಾಕೆ ಮಾಡೊಕು ಹೇಳಿ... ಏನೋ ಸ್ವಲ್ಪ ಹೋಟೆಲ್ ಬಿಲ್ ಉಟ್ಟು.. ಅದ್‌ಎರ್ಡ್ ದಿನಲಿ ಡೆಲ್ಲಿಂದ ದುಡ್ಡು ಬಂದದೆ. ನಾವು ಸೆಟ್ಲ್ ಮಾಡುವೆ... ನಾವು ಏನು ಇವರ ದುಡ್ಡ್ ತಿಂಬೊದುಲೆ. ಕೊಟ್ಟವೆ. ಆದರೆ ಇಲ್ಲಿ ನೋಡಿ ಇದೆಂತ ಸಾರಾ...ನೀರಾ.... ಹೀಂಗೆ ಮಾಡುದಾ...

ಮೇಯರ್ : (ಸಾರಿಗೆ ಕೈಹಾಕಿ ನೋಡಿ) ಯಾರಂವ... ಘಟಿಂಗ.... ಹೋಟೆಲ್‌ನವಂಗೆ ತಲೆ ಸರಿ ಇಲ್ಲೆನಾ.... ಗೆಸ್ಟ್‌ಗಳಿಗೆಲ್ಲ ಹೀಂಗೆ ಮಾಡ್ದಾ.... ಚೇ... ದಿನಾ... ಇನ್ಸ್‌ಪೆಕ್ಷನ್ ಮಾಡುವೆ.. ಆದರೂ ಇದೆಂತ...

ಕ್ಷಮಿಸೊಕು... ಖಾವಂದರ್... ಇದ್ ದೊಡ್ಡ ಅಪರಾಧ. ಸಾಮಾನ್ಯ ಅಪರಾಧ ಅಲ್ಲ.

ಸಕ್ಸೇನಾ : ಎಂತ... ಅಷ್ಟು ದೊಡ್ಡ ಅಪರಾಧ...?

ಮೇಯರ್ : ಇಲ್ಲಿ ಬೇಕಾದಷ್ಟು ತರಕಾರಿ ಬೆಳೆ ವ್ಯವಸ್ಥೆ ಮಾಡ್ಯೊಳೋ... ನಮ್ಮ ನೆಟ್‌ವರ್ಕ್ ತುಂಬ ಲ್ಯಾಕ್ ಉಟ್ಟು... ಇಲ್ಲಿ ಎಲ್ಲ ವಸ್ತು ಬಾರಿ ಅಗ್ಗ. ಆದರೂ ನೋಡಿ ಕಂಜೂಸ್ ಮಾಡ್ದು.

ಸಕ್ಸೇನಾ : ಕಂಜೂಸ್‌ಂತೇಳ್‌ಬಡಿ... ಹಾಂಗೇನೂ

ಇಲ್ಲೆ. ಈಗ ದುಡ್ಡಿಲ್ಲೆ ಅಷ್ಟೆ. ದುಡ್ಡ್ ಬಂದ ಕೂಡ್ಲೆ ಕೊಟ್ಟನೆ.

ಮೇಯರ್ : ಚೇ...ಚೇ.... ಹಲ್ಕಾಂಗ... ದರಿದ್ರಂಗ.... ಹಡಬೆಗ.... ಸಾಲಾಗಿ ನಿಲ್ಸಿ ಗುಂಡು ಹೊಡಿಯೊಕು...

ಖಾವಂದರು ಬೇಜಾರು ಮಾಡಿಕೊಂಬಡಿ.....

ಸಕ್ಸೇನಾ : (ಸ್ವಗತ) ಯಬ್ಬ... ಎಂತ ಬ್ಯೊಗೊಳು.. ಹುಗ್ಗೆ ತಿಂಬವಂಗೆ ಸಾಕ್ (ಪ್ರಕಟ) ಹ್ಹೆ... ಹ್ಹೆ... ಬೇಜಾರ್ ಎಂತ...

ಮೇಯರ್ : ನೀವು ದಯಮಾಡಿ ನನ್ನೊಟ್ಟಿಗೆ ಬರೊಕು...

ಸಕ್ಸೇನಾ : ಹ್ಹಾಂ ಎಲ್ಲಿಗೆ.. (ಗಾಬರಿ).. ಬೇಡ.. ಬೇಡ.. ನಂಗೆ ಎಲ್ಲ ಅರ್ಥ ಆದೆ. ನಾವೇನ್ 420ಗ ಅಂತ ತಿಳ್ಕಂಡ್ ಒಳರಿಯಾ.... ನಾವೆಂತ ಕ್ರಿಮಿನಲ್‌ಗಳಾ... ಏನೋ ಹೋಟೆಲ್ ಬಿಲ್ಲ್ ಹಂಞ ಬಾಕಿ ಉಟ್ಟಪ್ಪಾ. ಅದ್ಕೆ ಒಬ್ಬ ಸೆಂಟ್ರಲ್ ಗವರ್ನ್‌ಮೆಂಟ್ ಅಧಿಕಾರಿನ.... ಎರೆಸ್ಟ್ ಮಾಡ್ಸುದಾ... ನಾವು ಡೆಲ್ಲಿಂದ ಬಂದೊವು.

ಮೇಯರ್ : ಗೊ...ಗೊ.... ಗೊತ್ತಾತ್ ಸರ್. ಎಂತ ನೋಡ್ಯರಿ ದೋಚಯ್ಯ...

ದೋಚಯ್ಯ : ಅದೇ ಇನ್ಸ್‌ಪೆಕ್ಷನ್.. ಆಸ್ಪತ್ರೆ.. ಕೋರ್ಟು, ಪೊಲೀಸ್ ಸ್ಟೇಶನ್, ಎಜ್ಯುಕೇಶನ್, ಜೈಲು...

ಸಕ್ಸೇನಾ : ಎಂತ... ಎಂತ... ಪೋಲೀಸ್ ಸ್ಟೇಶನಾ... ಜೈಲಾ...?

ಮೇಯರ್ : ದೋಚಯ್ಯ ಲುಕ್ ಹಿಯರ್....

ಸಕ್ಸೇನಾ : ವಾಟ್ ... ಅದೆಲ್ಲ ಬೇಡ. ನೀವು ನಮ್ಮ ಏನ್‌ಂತ ತಿಳ್ಕೊಂಡ್ ಒಳರಿ. ನಿಮ್ಮ ಇಡೀ ಪೋಲೀಸ್ ಬೆಟಾಲಿಯನ್ ಬಂದರೂ ನಮ್ಮ ಏನ್ ಮಾಡಿಕೂ ಆದುಲೆ. ನಾವು ಯಾರ್. ಸೆಂಟ್ರಲ್ ಗವರ್ನ್‌ಮೆಂಟ್ ಅಧಿಕಾರಿಗ. ನಮ್ಮ ಜೈಲಿಗೆ ಹಾಕ್ಯರಾ..

ಮೇಯರ್ : ಸಾರ್... ಹಾಂಗಲ್ಲ ಸಾರ್... ಚೇ.. ಆಫೀಸರ್‌ಗೆ ಬಾರಿ ಕೋಪ ಬಂದುಟು. ಲುಕ್ ದೋಚಯ್ಯ .... ಸಾರ್........ ನಾ ಏನೋ ಸಂಸಾರವಂದಿಗ. ಮನೆಲಿ ಹೆಣ್ಣ್ ಮಕ್ಕ ಒಳೊ. ಏನೋ ತಪ್ಪಾಗಿರ್ದು. ಎಜೆಸ್ಟ್ ಮಾಡಿಕಣಿ..

ಸಕ್ಸೇನಾ : ಎಂತ ಎಜೆಸ್ಟ್... ನೀವು ಸಂಸಾರವಂದಿಗ ಆದರೆ ನಾ ಯಾಕೆ ಜೈಲಿಗೆ ಹೋಕು... ನೀವು ಹೀಂಗೆ ಹೀಂಗೆ ಬಾಕನನೇ ಗೊತ್ತಾತ್. ನಿಮ್ಮದ್ ಎಂತದೋ ಸೀಂತ್ರಿ ಉಟ್ಟೂಂತ. ಅದೆಂತದ್ ಮಾಡ್ಯರಿಯೋ ಮಾಡಿ. ನಾ.. ಮೇಲೆ ಬರ್ದ್ ಹಾಕಿನೆ....

ಮೇಯರ್ : ಸಾರ್... ಕ್ಷಮಿಸಿ. ಕರುಣೆ ತೋರ್ಸೊಕು.. ಏನೇ ತಪ್ಪಾಗಿದ್ದರೂ ಹೊಟ್ಟೆಗೆ ಹಾಕಣಿ. ನನ್ನದ್ ಬರೇ ಆನರರಿ ಕೆಲಸ. ಮೇಯರ್‌ಗೆ ಸಂಬಳ ಇಲ್ಲೆ. ಏನೋ ಸ್ವಲ್ಪ ಆನರೇರಿಯಂ, ಸ್ವಲ್ಪ ಟಿ.ಎ ಸಿಕ್ಕಿದೆ. ಅದ್ ನಾಮ್ಕೆವಾಸ್ತೆ... ಸಾರ್... ನಿಮ್ಮಕ್ಕಲೆ ಈ ವ್ಯಾಪಾರಿ

ಸಂಘದವು ಬಂದೊಳನಾ ಹೇಂಗೆ. ಅವರು ಬರೇ ಡೋಂಗಿಗ. ಚಾಡಿಕೋರಂಗ, ಸುಳ್ಳೇ ಹೇಳ್ದ್. ನೀವು ಅವರ ಮಾತ್ ನಂಬ್‌ಬಡಿ. ಅಂತದ್ದೇನೂ ಇಲ್ಲೆ. ಬೇಕರೆ ನೀವೇ ಬಂದ್ ತಪಾಸಣೆ ಮಾಡಿ. ನಮ್ಮದೆಲ್ಲ ಪರ್ಫೆಕ್ಟ್. ಅನುದಾನ ಪೂರ ಖರ್ಚಾದೆ. ಬಿಲ್ಡಿಂಗ್, ಡೆವಲಪ್‌ಮೆಂಟ್ ಎಲ್ಲ ನೋಡಿ. ತಪ್ಪಿದ್ದರೆ ಶಿಕ್ಷೆ ಕೊಡಿ. ನಮ್ಮಲ್ಲಿ ಲಂಚಗಿಂಚ ಇಲ್ಲವೇ ಇಲ್ಲೆ. ಎಲ್ಲೋ ಒಂದ್ ಶಾಲ್... ಒಂದ್ ಕೋಟ್... ಅದ್ ಪ್ರೀತಿಲಿ ಕೊಟ್ಟವೆ. ಅದೆಲ್ಲ ಪ್ರೆಸೆಂಟೇಶನ್... ಅಷ್ಟೇ... ಮತ್ತೆ ಟಿ.ವಿ, ಫ್ರಿಡ್ಜ್... ಅದ್ಕೆಲ್ಲ ದುಡ್ಡ್ ಕೊಟ್ಟಳೆ. ಧರ್ಮದಲ್ಲ... ನಮ್ಮ ಊರ್‌ಲಿ ಲಂಚ ಭ್ರಷ್ಟಾಚಾರ ಇಲ್ಲವೇ ಇಲ್ಲದಂಗೆ ನೋಡಿಕೊಂಡೊಳೆ. ಮತ್ತೆ ಮೊನ್ನೆದ್ ಟೈಪಿಸ್ಟ್‌ನ ಕೇಸ್..ಅದರ ಸ್ಟ್ರಿಕ್ಟ್ ಆಗಿ ವಿಚಾರಣೆ ಮಾಡಿಕೆ ಇನ್ಸ್‌ಪೆಕ್ಟ್ರಿಗೆ ಹೇಳ್ಯೊಳೆ.... ಮತ್ತೆ... ಸಬ್ಸಿಡಿ ಸಂಬಂಧಪಟ್ಟದ್... ಅದ್ ಬರೇ ಸಣ್ಣ ವಿಷಯ. ಸೀರಿಯಸ್ ಎಂಕ್ವಯರಿ ಮಾಡ್ಯೊಳೊ. ಅದೆಲ್ಲ ಸೆಟ್ಲ್ ಆಗುಟು...

ಸಕ್ಸೇನಾ : (ಗೊಂದಲ) ಅದೆಲ್ಲ ಕಥೆ ಹೇಳಿ ನನ್ನ ಸಿಕ್ಕ್‌ಸುವ ಅಂದಾಜಾ ಹೇಂಗೆ. ನಂಗೆ ಗೊತ್ತುಟ್ಟು. ಹೋಟೇಲ್ ಬಿಲ್ಲ್ ಅಲ್ಲ. ಅದರ ನಾ ಕೊಟ್ಟನೆ. ಅದ್ಕೆ ಇಷ್ಟೆಲ್ಲಾ ಕಥೆ ಬೇಡ. ಏನೋ ದೂರದ ಊರ್‌ಂದ ಬಂದ್ ಕಷ್ಟಕ್ಕೆ

ಸಿಕ್ಕಿ ಬಿದ್ದೊಳೊ. ಸ್ವಲ್ಪ ಹಣದ ಮುಗ್ಗಟ್ಟ್.. ತೊಂದ್ರೆ

ಮೇಯರ್ : ದುಡ್ಡ್‌ನ ತೊಂದರೆ...

ದೋಚಯ್ಯ : ಅಯ್ಯಯ್ಯೊ.. ನೀವ್ಗೆ ತೊಂದರೆ ಆತಾ...

ಮೇಯರ್ : ಲುಕ್ ಹಿಯರ್ ದೋಚಯ್ಯ... ಶಟಪ್... ಸಾರ್.. ನೀವ್ಗೆ ಹಣದ ತೊಂದ್ರೆ ಆಗುಟಾ... ಮತ್ತೆ ನಾವ್ಯಾಕೆ ಇರ್ದು. ಎಂತ ತೊಂದರೆ ಇದ್ದರೂ ಹೇಳಿ. ನಾವು ಸರಿ ಮಾಡುವೆ.

ಸಕ್ಸೇನಾ : ಹೌದು. ಹೋಟೇಲ್ ಬಿಲ್ಲ್ ಅಲ್ಲ, ನೀವು ಹೇಳ್ದು. ಅದೆಂತ ಲಕ್ಷಗಟ್ಟಲೆ ಉಟ್ಟಾ.. ಒಂದ್ಯೆದ್ ಸಾವಿರ ಆಗಿರ್ದು. ಅದಕ್ಕೆಂತ ದೊಡ್ಡ ಸಂಗತಿ ಮಾಡ್ದು.

ಮೇಯರ್ : ಸಾರ್ ಅಷ್ಟೇ ಅಲ್ಲ. ಅದಕ್ಕೇ ನೀವು ತಲೆಬಿಸಿ ಮಾಡ್‌ಬಡಿ. 10000 ಅಲ್ಲ. (ಹಣ ಕೊಡುತ್ತಾ) ಇಂದನಿ ತಕಣಿ.. ಸುರೂಗೆ ಹೋಟೇಲ್ ಬಿಲ್ಲ್ ಸೆಟ್ಲ್ ಮಾಡಿ. ಥ್ಹೆ.. ಥ್ಹೆ...

ಸಕ್ಸೇನಾ : ಏ..ತಿವಾರಿ.... ಹೋಗಿ ಆ ಹೋಟೇಲ್ ಬಿಲ್ಲು ಕೊಟ್ಟ್ ಬಾ... ಎಂತ ಅವಂದ್ ಯಾಗೊಳು ಕಿರಿಕಿರಿ...

ಮೇಯರ್ : (ದೋಚಯ್ಯನ ಬಳಿ) ಥ್ಹೆ...ಥ್ಹೆ.... 10000 ಅಂತ ಹೇಳಿ 20000ನೇ ಕೊಟ್ಟು ಬುಟ್ಟೆ. ಹೇಂಗೆ...

ದೋಚಯ್ಯ : ನೀವು ಭಯಂಕರ.
(ತಿವಾರಿ ಹೊರಡುತ್ತಿರುವಾಗ)

ಮೇಯರ್ : ಸರ್... ಸರ್... ನೀವೆಂತ... ಅದೆಲ್ಲ ಬೇಡ. ಹೋಟೇಲ್ ಬಿಲ್ಲು ನಾವು ನೋಡಿಕಂಡವೆ.

ಸಕ್ಸೇನಾ : ಅಯ್ಯೋ... ನೀವು ನಿತ್ತ್‌ಕಂಡ್ ಒಳರಿಯಲ್ಲ.. ಬನ್ನಿ ಕುದ್ರಿ...

ಮೇಯರ್ : ಅಯ್ಯೋ.. ಬೇಡ ಬೇಡ. ನಿಮ್ಮೆದುರು..... ನಾವು ನಿತ್ತ್‌ಕಂಡವೆ.

ದೋಚಯ್ಯ : ಹೌದೌದು... ನಾವು ನಿತ್ತ್‌ಕಂಡವೆ. ನಿತ್ತ್‌ಕಂಡೆ ಇರೊಕು.

(ಸಕ್ಸೇನಾ ಚೇರ್ ಮೇಲೆ ಕುದ್ದದೆ)

ಮೇಯರ್ : ಸಾರ್.... ಇವು ದೋಚಯ್ಯಂತ. ಬಾರಿ ಬಿಸಿನೆಸ್ ಉಟ್ಟು. ಸೊಸೈಟಿ ಮಾಜಿ ಪ್ರೆಸಿಡೆಂಟ್...

ಸಕ್ಸೇನಾ : ಹ್ಞ... ಹ್ಞ... ಹೌದಾ....

ಮೇಯರ್ : ಅದೇ... ಊರ್‌ಲಿ ಏನೆಲ್ಲಾ ಆಗ್ತಾ ಉಟ್ಟು. ಹೇಂಗೆ ನಡ್ದದೆಂತ ನೋಡೊಕಲ್ಲ. ಸ್ಟ್ರಿಕ್ಟ್ ಎಡ್‌ಮಿನಿಸ್ಟ್ರೇಶನ್.. ನಮ್ಮಲ್ಲಿ ಆಶ್ರಯ.. ಅಂಬೇಡ್ಕರ್, ಬಸವ ವಸತಿ ಎಲ್ಲಾ ಆಗುಟು. ನೂರಕ್ಕೆ ನೂರು ಇಂಪ್ಲಿಮೇಂಟ್. ಒಂದ್ ಸ್ಲಮ್ ಉಟ್ಟು. ಅದರ ಈ ಸರ್ತಿ ಕ್ಲಿಯರ್ ಮಾಡಿಸ್ತಾ ಒಳೆ. ನಾನೇ ಸ್ವತಃ ನಿತ್ತ್ ಕೆಲ್ಸ ಮಾಡಿಸ್ತಾ ಒಳೆ. ಅಲ್ಲಿ ಒಂದ್ ದೇವಸ್ಥಾನ ಕಟ್ಟೊಕುಂತ ಉಟ್ಟ್. ಊರ್‌ನವರ ಒತ್ತಾಯ. ಏನೋ ಶಾಂತಿ, ನೆಮ್ಮದಿ ಬೇಕಾಗಿ... ನಮ್ಮ ಪ್ರಯತ್ನ

ಸಕ್ಸೇನಾ : ಗುಡ್... ಗುಡ್... ಒಳ್ಳೆ ಕೆಲ್ಸ ಮಾಡ್ತಾ

ಒಳರಿ.. ನೀವು ಬಂದದ್ ಒಳ್ಳೆದಾತ್. ಪರಸ್ಥಳ ನೋಡಿ. ಸ್ವಲ್ಪ ತೊಂದರೆ ಆದೆ. ಎಂತ ಮಾಡ್ದು...?

ಮೇಯರ್ : ಹೌದೌದು ಆದೆ... ತೊಂದರೆ ಆದೆ... ... ನಮ್ಮ ಊರು ಉಟ್ಟಲ್ಲ. ಹಿಂದೆಂದಲೂ ಅತಿಥಿ ಸತ್ಕಾರಕ್ಕೆ ಬಾರಿ ಫೇಮಸ್...

ದೋಚಯ್ಯ : ಹೌದೌದು... ನಮ್ಮ ಊರ್‌ನ ಅತಿಥಿ ಸತ್ಕಾರ... ಸಂಸ್ಕೃತಿ...

ಮೇಯರ್ : ಅಲ್ಲ.. ಅದು ನಮ್ಮ ಕರ್ತವ್ಯ...

ದೋಚಯ್ಯ : ಕರ್ತವ್ಯಪ್ಪ.... ಕರ್ತವ್ಯ...

ಮೇಯರ್ : (ಆಚೆ ಈಚೆ ನೋಡಿ) ಸಾರ್... ಈ ಕೋಣೆ ಬಾರಿ ಸಣ್ಣದ್. ನಾ ಮೇಯರ್ ಆಗಿರ್‌ಕನ ನೀವು ಇಷ್ಟ್ ಸಣ್ಣ ಕೋಣೆಲಿ ಇರ್ದು ಸರಿಯಲ್ಲ.

ತಿವಾರಿ : ದರಿದ್ರ ರೂಮು, ಮುರ್ಕಟೆ ಮಂಚ. ಹಾಸಿಗೆಲೆಲ್ಲ ಚಗಣೆ, ಉಮ್ಮಣಿಯಂತೂ ಹೇಳಿಕೇ ಬೊತ್ತ್.

ಮೇಯರ್ : ಅಯ್ಯಯ್ಯೋ... ಸಾರ್. ನೀವು ತಪ್ಪು ತಿಳ್ಕಣಿಕೆ ಬೊತ್ತ್.. ಒಂದ್ ಮಾತ್ ಕೇಳ್ನಿ. ಐ ಮೀನ್.. ನೀವು.. ತಪ್ಪು ತಿಳ್ಕಂಬಡಿ... ಅದೆಂತಂತೇಳ್ರೆ...

ಸಕ್ಸೇನಾ : ಹ್ಣ.... ಎಂತ ಹೇಳಿ...

ಮೇಯರ್ : ಅಲ್ಲ ನೀವು ತಪ್ಪು ತಿಳ್ಕಂಬೊದುಲೆ ಅಂತೇಳ್ರೆ.... ಐ ಮೀನ್...

ಸಕ್ಸೇನಾ : ಯು... ಮೀನ್.... ವಾಟ್.....

ಮೇಯರ್ : ಅಲ್ಲ ಮತ್ತೆ ನೀವು ಬೇಜಾರ್ ಮಾಡಿಕಂಡ್ರೆ..

ಸಕ್ಸೇನಾ : ಥಕ್.... ಅದು ಎಂತ ಅಂತ ಹೇಳಿ ಮಾರ್‍ರೆ....

ಮೇಯರ್ : ಅಂಥಾದ್ದೇನಿಲ್ಲೆಪ್ಪಾ.. ಐ ಮೀನ್.. ನಮ್ಮ ಮನೆ ತುಂಬ ಸಣ್ಣದ್. ಹಳೆ ಕಾಲದ್. ಆದರೂ ರೂಂ ಲ್ಯಾಕುಟ್ಟು. ನೆಂಟ್ರ್‌ಗ ಬಂದರೆ ಬೇಕೂಂತ ಪೊರ್ಲು ಮಾಡಿ ಕಟ್ಟಿಯಳೆ. ಗಾಳಿ ಬೆಳಕ್ ಎಲ್ಲ ಸರಿ ಉಟ್ಟು. ನೀವು ಅಲ್ಲಿಗೆ ಬಂದಿದ್ದರೆ ಒಳ್ಳೆದಿತ್ತ್. ಹಾಂಗೆ ಊಟ ತಿಂಡಿ ಎಲ್ಲಾ ಅಲ್ಲೇ ಆದೆ. ಐ ಮೀನ್.. ನೀವು ತಪ್ಪು ತಿಳ್ಕಣಿಕೆ ಬೊತ್ತ್...

ಸಕ್ಸೇನಾ : ಅಯ್ಯೋ ಅಷ್ಟೇನಾ.... ಅದಕ್ಕೇ ನಾಕು... ಪೋಯಿ... ನಂಗೆ ಈ ರೂಮು ಸ್ವಲ್ಪನೂ ಹಿಡ್ಸುದುಲೆ...

ಮೇಯರ್ : ಓ ಮೈ ಗಾಡ್... ಅಯ್ಯೋ.... ಅಯ್ಯೋ... ಮೈ ಪ್ಲೆಜರ್... ತುಂಬಾ ಸಂತೋಷ. ಸಾರ್... ನನ್ನ ಹೆಣ್ಣ್‌ಗೆನೂ ತುಂಬಾ ಕುಸಿಯಾದು. ಐ ಮೀನ್.... ನನ್ನ ಮಿಸೆಸ್... ಯಾಗೋಳು ಹೇಳ್ದೆ. ದೊಡ್ಡ ಅತಿಥಿಗ ಬಂದರೆ ಮನೆಗೆ ಕರ್ಕಂಡ್ ಬನ್ನಿಂತ. ಅಲ್ಲಿ ಬೇರೆ ಯಾರೂ ಇಲ್ಲೆ. ನಾ, ನನ್ನ ಹೆಣ್ಣ್ ಮತ್ತೆ ಮಗ... (ಮಗಳ್)

ಸಕ್ಸೇನಾ : ತಿವಾರಿ... ಎಲ್ಲ ಪ್ಯಾಕ್ ಮಾಡು... ಇವು ಒತ್ತಾಯ ಮಾಡ್ತಾ ಒಳೋ. ಅವ್ಕ ಬೇಜಾರ್ ಮಾಡ್‌ದು ಸರಿಯಲ್ಲ. ಅಲ್ಲಿಗೆ ಪೋಯಿ.

(ತಿವಾರಿ ರಪರಪ ಪ್ಯಾಕ್ ಮಾಡುತ್ತಾನೆ)

ಮೇಯರ್ : ಹಾಂಗೆ ಹೋಗ್ತಾ... ಸರ್.... ದಾರಿಲಿ ಐ ಮೀನ್.. ಊರ್‌ಲಿ ಆಗ್ತಾ ಇರುವಡೆ ವಲಪ್‌ಮೆಂಟ್ ಕೆಲ್ಸನ ನೋಡಿಕಂಡ್ ಹೋಕ್. ಅಲ್ಲ... ನೀವ್ಗೆ ಇಷ್ಟ ಆದರೆ.... ಸರಕಾರಿ ಕಾಮಗಾರಿ ಆಗ್ತಾ ಉಟ್ಟು.

ಸಕ್ಸೇನಾ : ಸರಕಾರಿ ಕಾಮಗಾರಿನ? ಅದೆಲ್ಲ ಯಾಕೆ?

ಮೇಯರ್ : ಏನಿಲ್ಲೆ... ಒಮ್ಮೆ ನೀವು ಕಣ್ಣಾರೆ ನೋಡಿಬುಟ್ರೆ. ನಾವ್ಗೆ ಸಮಾಧಾನ. ನಾವು ತುಂಬ ಆಸಕ್ತಿಲಿ, ಜವಾಬ್ದಾರಿ ತಕಂಡ್ ಮಾಡ್‌ವ ಕೆಲಸ. ಐ ಮೀನ್ ಡೆವಲಪ್‌ಮೆಂಟ್ ಮಾಡಿಸ್ತಾ ಒಳೊ. ನೀಮೊಮ್ಮೆ ನೋಡ್ರೆ ಸಮಾಧಾನ.

ಸಕ್ಸೇನಾ : ಓ.ಕೆ... ಓ.ಕೆ... ನೋಡೊಮೊ... ನಾವ್ಗೆ ಏನಾಕೂ...

ಮೇಯರ್ : ಹಾಂಗೆನೆ ನಮ್ಮ ಶಾಲೆ, ನಮ್ಮ ಸ್ಲಂಕ್ಲಿಯರೆನ್ಸ್, ಆಸ್ಪತ್ರೆ, ಬಸ್‌ಸ್ಟಾಂಡ್....

ಸಕ್ಸೇನಾ : ಸರಿ.. ಸರಿ.. ನೋಡೊಮೊ. ಹಾಂಗೆ ನಿಮ್ಮ ಮನೆಗೆ ಹೋಗುವ ದಾರಿಲೆ ಸಿಕ್ಕಿದೆಲ್ಲ...

ಮೇಯರ್ : ಐ ಮೀನ್.. ಎಸ್.. ದಾರಿಲೇ ಸಿಕ್ಕಿದೆ. ಮತ್ತೆ ಪೋಲೀಸ್ ಸ್ಟೇಶನ್, ಕೋರ್ಟು, ಜೈಲ್...

ಸಕ್ಸೇನಾ : (ಗಾಬರಿ) ಪೋಲೀಸ್ ಸ್ಟೇಶನ್, ಜೈಲ್ ಅದೆಲ್ಲ ಯಾಕೆ. ಬೇಡ... ಬೇಡ. ನಾ... ಜೈಲಿಗೆ ಬಾದುಲೆ.

ಮೇಯರ್ : ಚೇ...ಚೇ... ಒತ್ತಾಯ ಇಲ್ಲೆಪ್ಪಾ... ನೀವು ಒಪ್ಪಿರೆ ಮಾತ್ರ...

ಸಕ್ಸೇನಾ : ತುಂಬ ದೂರ ಉಟ್ಟಾ... ನಡೆಕಾ....

ಮೇಯರ್ : ಬೇಡಪ್ಪಾ... ನನ್ನ ಕಾರು ಉಟ್ಟು.. ಸ್ವಲ್ಪ ಹಳೆದ್...

ದೋಚಯ್ಯ : ಆದರೂ ಲ್ಯಾಕ್ ಉಟ್ಟು... ಹೇಂಗೆ ಓಡ್ದೆ ಗೊತ್ತುಟಾ..

ಮೇಯರ್ : ಲುಕ್ ಹಿಯರ್... ಮಿ. ದೋಚಯ್ಯ (ಸಕ್ಸೇನಾ ತಿವಾರಿ ಬಳಿ ಬಂದು ಏನೋ ಗುಟ್ಟಾಗಿ ಮಾತನಾಡುತ್ತಾನೆ)

ದೋಚಯ್ಯ : ಹೇಳಿ ಮೇಯರ್ ಸಾಯೇಬ್ರೆ...

ಮೇಯರ್ : ಲುಕ್ ಹಿಯರ್... ದೋಚಯ್ಯ... ಸಾಯೇಬ್ರ್.. ಕಾರ್‌ಲಿ ಇರಿಕಾಕನ ಬೇರೆವು ಇರ್‌ದು ಸರಿ ಆದುಲೆ. ಅದ್ಕೆ ನೀವು ಮುಂದೆ ಓಡಿಕಂಡ್ ಹೋಗಿ... ಆಸ್ಪತ್ರೆ ಹಕ್ಕಲೆ ಇರಿ. ಆಸ್ಪತ್ರೆಲಿ ಹೇಳಿ.. ಸಾಯೇಬ್ರ್ ಬರ್ತಾ ಒಳೋಂತಾ. ಆಮೇಲೆ ಆಲ್ಲಿಂದ ನೀವೇ ನಮ್ಮ ಮನೆವರೆಗೂ ಹೋಗಿ ಬರೊಕು. ನಮ್ಮ ಮನೆಯವ್ಕೆ ಸಾಯೇಬ್ರ್ ಬರುವ ವಿಷಯ ಹೇಳೊಕು. ಇರಿ. ಒಂದು ಚೀಟ್ ಬರ್ದ್ದ ಕೊಟ್ಟನೆ..

ಸಕ್ಸೇನಾ : ಹೊಡ್ರೊಮೊನಾ...

ಮೇಯರ್ : ಎಸ್.. ಸರ್..ಒನ್ ಮಿನಿಟ್ (ಚೀಟಿ ಬರ್ದ್ ಕೊಟ್ಟ್) ತಕ ಹೊಡ್ರ್...

ಬಾಚಯ್ಯ : (ಹೊರಗೆಂದ ಬಂದವನೇ) ಸಾರ್ ನಾ ಆಗಲೇ ಹೇಳ್ತ್ನೆ ನಾ ಎಂತ ಕಾರ್ ಬೇಕಾದು ತ ನಾವ್ ನಮ್ಮ ಗಾಡಿಲೇ ಹೋದವೆ...

ಮೇಯರ್ : ಸರಿ ಸರಿ ಬೇಗ ಹೊರ್ಡಿ... ಎಲ್ಲಾ ವ್ಯವಸ್ಥೆ ಮಾಡಿ

ಮೇಯರ್ : (ಸಕ್ಸೇನಾ ತಿವಾರಿ ಲಗೇಜ್ ಎತ್ತಿಕೊಳ್ಳುವುದನ್ನು ಕಂಡು) ಚೇ... ಚೇ... ಬುಡಿ. ಬುಡಿ... ನೀವು ಲಗ್ಗೇಜ್.... ಬೇಡ.. ಬೇಡ.... (ಆಚೆ ಈಚೆ ನೋಡುತ್ತಾನೆ. ಯಾರೂ ಕಾಣಿಸುವುದಿಲ್ಲ) ಬೇಡ.. ನಾನೇ ಹಿಡ್ಕಣೆ.. ಪೋಯಿ ಪೋಯಿ ನೀವು ಮುಂದೆ ಹೋಗಿ. ನಾ ತನ್ನೆ... ಹ್ಞೆ.. ಹ್ಞೆ.... ನಾ ಜನ ಬಾರಿ ಸೀದಾ ಸಾರ್.... ಐ ಮೀನ್.. ಸಾರ್ವಜನಿಕ ಸೇವೆ... ಹಾಂಗೇಂತೇಳ್ರೆ ಹಾಂಗಲ್ಲ... ಕ್ರಮೋಲಿ ಇರೋಕೂಂತ.... ನಂದ್ ಏನಿದ್ದರೂ ಒಳಗೊಂದ್ ಹೊರಗೊಂದು ಇಲ್ಲೆ...

ಸಕ್ಸೇನಾ : ಯಸ್... ಯಸ್ ಹಾಂಗೇ ಇರೋಕು. ಪೋಯಾ....

**(ನಿರ್ಗಮನ. ಕತ್ತಲು)**

# ಅಂಕ – 3

(ಮೇಯರ್ ಮುತ್ತಣ್ಣ ಮನೆ. ಕಾವೇರಿ ಮತ್ತು ಮಗಳೂ ಮೋನಿಕಾ ಇದ್ದಾರೆ)

ಕಾವೇರಿ : ಅಲ್ಲ... ಗುಡ್ಡಪ್ಪ ಹೋದವಂದ್ ಸುದ್ದಿಯೇ ಇಲ್ಲೆ. ಎಂತ ಕಥೆ. ಎಲ್ಲಿ ಸತ್ತತಪ್ಪಾ. ಇಂವ... ಇದರ ಮೇಲೆ ನೀ ಒಂದ್.. ಬೇಗ ಹೋರ್ಡ್ಂತೇಳ್ರೆ ಸಿಂಗಾರ ಮಾಡಿಕಂಡೇ ಇದ್ದ. ಈಗ... ಆಗಂದ ಪಿರಿಪಿರಿ ಮಾಡಿಕಂಡ್ ಒಳ. ನಾವು ಬೇಗ ಹೋಗಿದ್ದರೆ ಎಲ್ಲ ವಿಷಯ ಗೊತ್ತಾತಿತ್. ಚೇ... ಈಗ ಕಾಯೋದೆ ಆತ್.

ಮೋನಿಕಾ : ಮಮ್ಮಿ ಪಿರಿಪಿರಿ ಹೇಳ್ದು ನೀ... ನಾ ಅಲ್ಲ. ಗುಡ್ಡಪ್ಪ ಈಗ ಬಾದೂಂತ ಹೇಳಿಕಂಡೇ ಒಳೆ. ಒಂಚೂರು ತಡ್ಕ. ಅಂಬೇರ್ಪು ಮಾಡ್ಬಡ... ಅದಾ ಗುಡ್ಡಪ್ಪ ಬರ್ತಾ ಉಟ್ಟು...

ಕಾವೇರಿ : ನೀ ಲೊಟ್ಟೆ ಹೇಳ್ಬಡ ಮಾರಾಯ್ತಿ.. ನಿಂಗೆ ಯಾರ್ ಬಂದರೂ ಗುಡ್ಡಪ್ಪನಂಗೇ ಕಂಡವೆ.

ಮೋನಿಕಾ : ಇಲ್ಲೆಮ್ಮಾ ಬಾತ್... ಓಡಿಕಂಡೇ ಬರ್ತಾ ಉಟ್ಟು..

ಕಾವೇರಿ : ಬಂದೇ ಬುಟ್ಟನಾ....

(ಗುಡ್ಡಪ್ಪ ಏದುಸಿರು ಬಿಡುತ್ತಾ ಪ್ರವೇಶ)

ಕಾವೇರಿ : ಆಫೀಸರ್ ಬಂದೊಳನಾ...

ಮೋನಿಕಾ : ಅವು ನೋಡಿಕೆ ಹೇಂಗೊಳೊ..

ಗುಡ್ಡಪ್ಪ : ಅಲ್ಲಾ... ದೋಚಯ್ಯ ಬರ್ತಾ ಒಳೊ. ಎಲ್ಲ ಅವ್ವೇ ಹೇಳುವೆ. ನಂಗೀಗ ಪುರುಸೋತ್ತಿಲ್ಲೆ. ಒಂದ್ ಗಂಟೇಲಿ ಎಲ್ಲಾ ರೆಡಿ ಮಾಡುಕೂಂತ ಹೇಳ್ಕ್ಯೊಳೊ... ನಾ ಹೋನೆ.

ಕಾವೇರಿ : ಥಕ್ ನಿನ್ನ ಇಷ್ಟ್ ಹೊತ್ತು ಕಾದದ್ ದಂಡ ಆತ್.

(ಅಷ್ಟರಲ್ಲಿ ದೋಚಯ್ಯ, ಬಾಚಯ್ಯ ಪ್ರವೇಶ)

ಕಾವೇರಿ : ಅಲ್ಲ ದೋಚಯ್ಯ. ಬಾಚಯ್ಯ... ಬೊಳ್ಪುಂದ ನಾವು ಕಾದ್‌ಕಂಡ್ ಒಳೊ. ನೀವು ಹೋದವರ್ದ್ ಸುದ್ದಿಯೇ ಇಲ್ಲೆ. ಎಸ್ಟ್ ಕಾಯೊದು ಮಾರಾಯ್ರೆ...

ಮೋನಿಕಾ : ಮಮ್ಮಿ ಸ್ವಲ್ಪ ಸುಮ್ಮನಿದ್ಯನ... ಅವು ಹೇಳಲಿ. ದೋಚಯ್ಯ ಆಫೀಸರ್ ಅವ್ವೆನಾ...

(ಏದುರಿಸು ಬಿಡುತ್ತಿರುವ ದೋಚಯ್ಯ.. ಹೌದೆಂದು ತಲೆ ಆಡಿಸುವನು)

ಕಾವೇರಿ : ನೋಡಿಕೆ ಹೇಂಗೊಳೊ ಅವು.

ಮೋನಿಕಾ : ಯಂಗ್... ಮೀಸೆ ಉಟ್ಟಾ...

(ದೋಚಯ್ಯ, ಬಾಚಯ್ಯ ಏದುಸಿರು. ಬರೇ ಕೈ ಭಾಷೆ)

ಕಾವೇರಿ : ಯಾಗ ಬಂದದ್‌ಗಡ

ಮೋನಿಕಾ : ಕಾರ್ ಉಟ್ಟಾ....

ಕಾವೇರಿ : ಎರ್ಡ್ ವಾರ ಆತ್‌ಗಡಲ್ಲ ಬಂದ್. ಯಾರೋ ಹೇಳ್ದಂಗಿತ್ತ್.

ಮೋನಿಕಾ : ನಿಂಗೆ ಅಷ್ಟು ಬೇಗ ನ್ಯೂಸ್ ಸಿಕ್ಕಿತಾ....

ಕಾವೇರಿ : ನೀ ಸುಮ್ಮಂಗಿರ್... ದೋಚಯ್ಯ ಎಂತಾರ್

ಹೇಳಿ ಮಾರ್‍ರೆ...

ದೋಚಯ್ಯ : (ಸುಧಾರಿಸಿಕೊಳ್ಳುತ್ತಾ ಕೈಯಲ್ಲಿ ಸುಮ್ಮನಿರಿ ಎಂದು ಸಂಜ್ಞೆ ಮಾಡಿ) ಬಂದೊಳಮ್ಮ... ಬಂದೊಳೊ ಅವ್ವೆ. ದೊಡ್ಡ ಸಾಯೇಬ್ರ್... ನೋಡಿಕೆ ಹೇಂಗೊಳೊ ಗೊತ್ತುಟ್ಟಾ... ಭಯಂಕರ ಜಬರ್‌ದಸ್ತ್...

ಕಾವೇರಿ : ಮತ್ತೆ ದೊಡ್ಡ ಸಾಹೇಬ್ರ್ ಅಲ್ಲಾ.

ಬಾಚಯ್ಯ : ಹೌದಪ್ಪ. ನೋಡ್ರೆ ಗೊತ್ತಾದೆ. ಭಾರಿ ದೊಡ್ಡ ಮನ್‌ಶ. ಬಾರೀ ಬುದ್ಧಿವಂತ.. ಒಳ್ಳೆ ಗುಣ ನಡತೆ, ಚಿನ್ನದಂತ ಹುಡುಗ ಅಪರಂಜಿ...

ಮೋನಿಕಾ : ಮಾವ ಲೇಟರ್ ಬರ್‍ದಿದ್ದೊ ಅಲ್ಲ... ಅದೇ ಸೇಮ್ ಪರ್ಸನ್ ಅಲ್ಲಾ...?

ದೋಚಯ್ಯ : ಹೌದಪ್ಪ ಅವ್ವೆ... ಅವರ ಸುರುಗೆ ಕಂಡ್ ಹುಡ್ಕಿದ್ ನಾವೇ... ನಾ ಮತ್ತು ಬಾಚಯ್ಯ..

ಮೋನಿಕಾ : ಮತ್ತೆಂತಾತ್ ಹೇಳಿ..

ಬಾಚಯ್ಯ : ಸದ್ಯ ದೇವರ ದಯ..ಅಂತದ್ದೇನೂ ಆತ್ಲೆ.. ಸುರುಗೆ ಬಾರಿ ರೋಪ್ ಹಾಕಿದೋ.. ನಮ್ಮ ಮೇಯರ್ ಹೆದ್ರಿಬುಟ್ಟೊ..

ಕಾವೇರಿ : ಅವು ಹಾಂಗೆನೆ... ಗಡಿಬಿಡಿ.. ಹೆದ್ರ್‌ಪುಕ್ಲ, ನಂಗೊತ್ತಿಲ್ಲೆನ.

ದೋಚಯ್ಯ : ಜೈಲು ನೋಡಿಕೆ ಪೋಯಿಂತೇಳ್ದೊ.. ಅಂದೊಂದು ಮಾತ್ರ ಬಿಲ್‌ಕುಲ್ ಬೇಡಂತ ಹೇಳ್ದೊ. ಹೋಟೇಲ್ ರೂಮು ಸರಿ ಇಲ್ಲೆ.. ತಗಣೆ, ಸೊಳ್ಳೆ ಉಟ್ಟೊಂತ ಸಿಟ್ಟ್ ಮಾಡಿಕಂಡೊ. ಆಮೇಲೆ ಮೇಯರ್ ಬಾರಿ

ಜಾಗ್ರತೆಲಿ ಮಾತಾಡಿ ಎಜೆಸ್ಟ್ ಮಾಡ್ದೊ. ಮೇಯರ್ ಒಳ್ಳೆ ಜನಂತ ಗೊತ್ತಾದ ಮೇಲೆ ಸಾಯೇಬ್ರ್ ಕೂಲ್ ಆದೊ. ಆಮೇಲೆ ಬಾರಿ ಲ್ಯಾಕ್ ಮಾತಾಡ್ದೊ.

ಕಾವೇರಿ : ಅಲ್ಲ... ಅವು ಯಾಕೆ ಅಷ್ಟ್ ಹೆದ್ರುದ್. ಹೆದ್ರ್ ಂತ ನಾ ಎಸ್ಟ್ ಹೇಳ್ಯೆಳೆ.

ಮೋನಿಕಾ : ನೀ... ಎಡೆಲಿ ಮಾತಡ್ ಬಡ...

ಬಾಚಯ್ಯ : ಆಸ್ಪತ್ರೆ ನೋಡಿಕೇಂತ ಹೋಗೊಳೊ.. ಊಟ ಅಲ್ಲೆ ಮಾಡುವೆಗಡ. ಆಂ... ಮೇಯರ್ ನೀವ್ಗೆ ಒಂದ್ ಕಾಗದ ಕೊಟೊಳೊ (ಕೊಡುತ್ತಾನೆ. ತೆಗೆದುಕೊಂಡು)

ಕಾವೇರಿ : ಅಲ್ಲ... ಅವು ನೋಡಿಕೆ ಹೇಂಗೊಳೊ.

ದೋಚಯ್ಯ : ಒಂದ್ ಇಪ್ಪತ್ತೈದು – 26 ವರ್ಷ.. ಸ್ವಲ್ಪ ಕಮ್ಮಿನೇ ಆದು. ಒಳ್ಳೆ ತಳ್ಳಂಗೆ ಬೆಳ್ಳಂಗೆ ಲ್ಯಾಕ್ ಓಳೊ. ಎಂಥ ಆ ಕಣ್ಣ್. ಭಯಂಕರ ಶಾರ್ಪ್... ನಂಗೊಮ್ಮೆ ಎದೆ ಜಿಗ್ಗ ಅತ್...

ಬಾಚಯ್ಯ : ನಂಗೊಮ್ಮೆ ಜಗ್ಗ ಆತ್..

ದೋಚಯ್ಯ : ಮತ್ತೆ.. ಎಷ್ಟಾದರೂ ಸೆಂಟ್ರಲ್‌ಂದ ಬಂದ ಸಾಯೇಬ್ರ್ ಅಲ್ಲಾ....

ಕಾವೇರಿ : (ಚೀಟಿ ಬಿಡಿಸಿ ಓದುತ್ತಾ) ಇದೆಂತ ಕಾಗದಪ್ಪ... ಸೌ। ಕಾವೇರಿಗೆ... ದೇವರ ದಯ. ಆಫೀಸರ್ ಬಂದೊಳೊ ಎಲ್ಲ ಸರಿಗಟ್ಟಾಗುಟು. ಅವು ನಮ್ಮ ಮನೆಗೆ ಬಂದವೆ. ಆ ಎದ್ರುನ ಕೋಣೆನ ಕ್ಲೀನ್ ಮಾಡ್ಸ್. ಬೆಡ್, ಬೆಡ್‌ಶೀಟ್ ಹೊಸ ಒಲ್ಲಿ

ಹಾಕಿ ಇಸ್. ನಾ ಬೇಗ ಬನ್ನೆ. ಮತ್ತೆ ಸ್ವಲ್ಪ ಹಾರ್ಲಿಕ್ಸ್... ಆ್ಯಪಲ್ ಹಾಂಗೆ ಯಾರ್ನಾರ್ ಶಾಪ್‌ಗೆ ಕಳಿಸಿ ಒಂದು ಬಾಟ್ಲಿ ಪೀಟರ್ ಸ್ಕಾಟ್ ತರ್ಸ್.. ಇಂತಿ ಆಶೀರ್ವಾದಗಳು ಮೇಯರ್ ಮುತ್ತಣ್ಣ.. ಅಲ್ಲ.. ಇಂದೆಂತ ಒಂದೂ ತಲೆಗೆ ಹೋದುಲೆ..

ಮೋನಿಕಾ : ನಿಂಗೆ ಗೊತ್ತಾಕಿಲೆ. ಅದ್ ನಾ ಹೇಳ್ನೆ.

ದೋಚಯ್ಯ : ಗಡಿಬಿಡಿ ಅಲ್ಲ.. ಗಡಿಬಿಡಿಲಿ ಗೀಚಿದ್.. ಎಂತಾ ಗೊತ್ತುಟ್ಟಾ... ಆ ಸಾಯೇಬ್ರ್ ಇಂದ್‌ಂದ ನಿಮ್ಮ ಮನೇಲಿ ಹಾಲ್ಟ್, ಹಾಂಗೆ ಎಲ್ಲ ವ್ಯವಸ್ಥೆನೂ ಆಕುಂತ..

ಕಾವೇರಿ : ಹ್ಞಾಂ.. ಹ್ಞಾಂ.. ಅವು ಬಾಕೆ ಮುಂದೆ ಎಲ್ಲ ರೆಡಿ ಆಕು.. ಗುಡ್ಡಪ್ಪಾ... ಏ.. ಗುಡ್ಡಪ್ಪಾ...

ಗುಡ್ಡಪ್ಪ : (ಬಂದು) ಎಂತಮ್ಮಾ....

ಕಾವೇರಿ : ಇಂದ... ಸಾಯೇಬ್ರ್ ಇಲ್ಲಿಗೇ ಬಂದವೆಗಡ. ಈ ಚೀಟಿಲಿ ಎಂತೆಲ್ಲಾ ಉಟ್ಟಾ. ಅದರೆಲ್ಲ ತಕಂಡ್ ಬಾ. ಬೇಗ ಬರೊಕು. ಮತ್ತೆ ಇಲ್ಲಿನೂ ಎಲ್ಲ ವ್ಯವಸ್ಥೇ ಆಕು. ತಡ ಮಾಡ್ಬಡ...

ಗುಡ್ಡಪ್ಪ : ಚೀಟಿ ಗೀಟಿ ಎಂತ ಬೇಡಮ್ಮ... ಅದೆಲ್ಲ ನಂಗೆ ಗೊತ್ತುಟ್ಟು... ನಾ ತನ್ನೇ....

ಕಾವೇರಿ : ನಿನ್ನದೊಂದು ದೊಡ್ಡ ಯಜಮಾನಿಕೆ. (ಚೀಟಿಯನ್ನು ಅವನ ಮೇಲೆ ಎಸೆಯುತ್ತಾಳೆ)

ದೋಚಯ್ಯ : ನಂಗೆ ಹೊತ್ತಾತ್.... ಇನ್ನ್ ಆಸ್ಪತ್ರೆಗೆ

ಹೋಕು. ನಾವ್ಗೆ ಕುಂಡೆ ತೊರ್ಸಿಕೂ ಪುರುಸೊತ್ತು ಇಲ್ಲೆ (ಹೋಗುತ್ತಾರೆ.)

ಮೋನಿಕಾ : ಮಮ್ಮಿ ದೊಡ್ಡ ಆಫೀಸರ್ ರಾಜಧಾನಿಂದ ಬಂದೊಳೊ. ಅವರ ಎದುರು ಲಕ್ಷಣ ಆಗಿ ಇರೊಕು. ನಾ ಸ್ವಲ್ಪ ಪ್ರೆಶ್ ಆಗಿ ಸೀರೆ ಉಟ್ಟನೆ.

ಕಾವೇರಿ : ಅದೆಲ್ಲ ಏನೂ ಬೇಡ. ಚೂಡಿದಾರ್ ಹಾಕಿರೆ ಸಾಕ್.

ಮೋನಿಕಾ : ಎಂತ ಬೇಡ. ನಾ... ಇಂದ್ ಜರಿಸೀರೆನೆ ಉಡ್ದು..

ಕಾವೇರಿ : ನಿನ್ನ ಪ್ರಾಯಕ್ಕೆ ಪೊರ್ಲು ಕಾಂಬೊದುಲೆ ಮಾರಾಯ್ತಿ.. ಆ ಸೀರೆನ ನಾ ಉಟ್ಟನೆ. ನೀ ಚೂಡಿದಾರ್ ಹಾಕ್.

ಮೋನಿಕಾ : ಬೇಡ ಮಮ್ಮಿ... ನೀ... ಅದರ ಉಟ್ಟರೆ ದೊಡ್ಡ ಮಡ್ಡಮ್ಮನಂಗೆ ಕಂಡಿಯಾ..

ಕಾವೇರಿ : ಎಂತ... ಮಡ್ಡಮ್ಮಂತೇಳಿಯನ. ನಿನ್ನ ಸನಿ ಬುಟ್ಸಿಕುಟ್ಟು.

(ಅಷ್ಟರಲ್ಲಿ ಸದ್ದು. ಪೊಲೀಸ್ ಪೇದೆಯ ಪ್ರವೇಶ. ಮನೆ ಒಳಗೆ ಬಂದು ಎಲ್ಲ ಇನ್ಸ್‌ಪೆಕ್ಶನ್ ಮಾಡಿ ಹೊರಗೆ ಹೋದವೆ. ಯಾರೋ ಬಂದಂತೆ ಸದ್ದು ತಕ್ಷಣ ಅವರು ಸೆಟೆದು ನಿಂತು ಸೆಲ್ಯೂಟ್ ಹೊಡೆಯುತ್ತಾರೆ. ಆಗ ಸೂಟ್‌ಕೇಸ್ ಹಿಡಿದ ತಿವಾರಿ ಪ್ರವೇಶ. ಈ ಕಡೆಯಿಂದ ಗುಡ್ಡಪ್ಪ)

ತಿವಾರಿ : ಹಾಯ್..

ಗುಡ್ಡಪ್ಪ : ಹಾಯ್ ಹಾಯ್...

ತಿವಾರಿ : ಹಲೋ..

ಗುಡ್ಡಪ್ಪ : (ಕೈ ಮುಂದೆ ಮಾಡಿ) ಹಲೋ... ಮೈ ಸೆಲ್ಫ್ ಈಸ್ ಗುಡ್ಡಪ್ಪ. ಸೆಕ್ರಟರಿ ಟು ಮೇಯರ್...

ತಿವಾರಿ : (ಕೈ ಕುಲುಕಿ) ಮೇರಾ ನಾಮ್ ತಿವಾರಿ. ಅತುಲ್‌ರಾಮ್ ಅನಂತರಾಮ್ ತಿವಾರಿ.

ಗುಡ್ಡಪ್ಪ : ಓಹೋ... ಸೆಕ್ರಟರಿ ಟು ದ ಸೆಂಟ್ರಲ್ ಆಫೀಸರ್. ಗ್ಲಾಡ್ ಟು ಮೀಟ್‌ಯೂ..

ತಿವಾರಿ : ಸೆಂಟ್ರಲ್ ಆಫೀಸರ್....?

ಗುಂಡಯ್ಯ : ಅದೇ ಸೆಂಟ್ರಲ್.. ಸೆಂಟ್ರಲ್...

ತಿವಾರಿ : ಹ್ಞಾಂ... ಹ್ಞಾಂ.. ಅವರೇ.. ಹೌದು ನಾನು ಸೆಕ್ರಟರಿ

ಗುಂಡಯ್ಯ : ಯಸ್.. ಯಸ್.... ಡೆಲ್ಲಿ ಆಫೀಸರ್...

ತಿವಾರಿ : ಅಚ್ಚಾ ಅಚ್ಚಾ.... ಈ ಲಗೇಜು..

ಗುಂಡಯ್ಯ : ಬನ್ನಿ... ಈ ಕಡೆ ಬನ್ನಿ. ಇದ್ ನಿಮ್ಮ ಗೆಸ್ಟ್‌ರೂಂ...
(ಒಳಗೆ ಹೋಗುತ್ತಾರೆ.)

(ಸದ್ದು. ಮುತ್ತಣ್ಣ ಪ್ರವೇಶ. ಆ ಕಡೆ ನೋಡಿದಾಗ ಮುದ್ದೆಯಾದ ಚೀಟಿ ಕಾಣಿಸುತ್ತದೆ. ಪೇದೆಗಳನ್ನು ಕೆಕ್ಕರಿಸಿ ನೋಡಿ ಅದನ್ನು ಹೆಕ್ಕಿ ತನ್ನ ಕೋಟಿನ ಜೇಬಿನಲ್ಲಿ ಇಡುತ್ತಾನೆ. ಅಷ್ಟರಲ್ಲಿ ಸಕ್ಸೇನಾ ಪ್ರವೇಶ. ಜತೆಯಲ್ಲಿ ಇಂಜಿನಿಯರ್, ಡಾಕ್ಟರ್, ಎಜ್ಯುಕೇಶನ್ ಆಫೀಸರ್)

ಸಕ್ಸೇನಾ : ವಂಡರ್‌ಫುಲ್.. ಭಾರಿ ಲ್ಯಾಕ್ ಇತ್ತ್. ಒಳ್ಳೆ ವಿಸಿಟ್. ಲ್ಯಾಕ್‌ನ ಊಟ, ಒಳ್ಳೆ ಜನ, ಒಳ್ಳೆ ಊರು, ಬೇರೆ ಎಲ್ಲಿಯೂ ಹೀಂಗೆಲ್ಲ ನೋಡಿ ಕಂಡತ್ಲೆ. ಬಂದವರೆಲ್ಲ ಕರ್ಕಂಡ್ ಹೋಗಿ ಊರು ತೋರ್ಸುವ ಕ್ರಮ ಎಲ್ಲಿಯೂ

ಇಲ್ಲೆಪ್ಪಾ.

ಮೇಯರ್ : ಹ್ಹೆ...ಹ್ಹೆ... ಇದ್ ನಾ ಹೇಳ್ದು ಅಲ್ಲ... ಬೇರೆ ಊರ್‌ಲಿ.. ಆಫೀಸರ್‌ಗ, ಲೀಡರ್‌ಗ ತಮ್ಮ ಕಿಸೆ, ಹೊಟ್ಟೆ ತುಂಬಿಸುದರ್ಲಿ ಇದ್ದವೆ. ಅವ್ಕೆ ಬಂದವರ ಐ ಮೀನ್.. ನಿಮ್ಮಂತವರ ಗೊಡವೆನೆ ಇಲ್ಲೆ. ನನ್ನ ಮಟ್ಟಿಗೆ ಹೇಳ್‌ದಾದರೆ ನಾವ್ಗೆ ಸಮಾಜಸೇವೆನೆ ಮುಖ್ಯ. ಆದರ್ಶ ಮುಖ್ಯ.

ಸಕ್ಸೇನಾ : (ತೇಗಿ) ಗುಡ್... ಊಟ ಬಾರೀ ಲ್ಯಾಕ್ ಇತ್ತ್. ನಿಮ್ಮ ಊರ್ಲಿ. ನೀವೆಲ್ಲ ಯಾಗೊಳು ಇಂತದ್ದೆ ಉಂಬೋದಾ ಹೇಂಗೆ.

ಮೇಯರ್ : ಚೇ...ಚೇ.... ಹಾಂಗೆಲ್ಲ ಇಲ್ಲೆಪ್ಪಾ... ನಾವು ಸರಳಾತೇಂಲ್ರೆ ಸರಳಾ..ಗಂಜಿ ಪೊಜ್ಜಿ... ನಿಮ್ಮೊಂತವ್ ಬಂದದ್ ಭಾಗ್ಯ. ನಮ್ಮ ಊರ್‌ನ ಇತಿಹಾಸಲಿ ಸುವರ್ಣಾಕ್ಷರಲಿ ಬರೆಕಾದ ದಿನ. ಏನೋ ನಮ್ಮ ಕೈಲಾದ್ ಮಾಡ್ಯೊಳೊ. ನೀವ್ಗೆ ಖುಷಿ ಆದರೆ ನಾವ್ಗೆನೂ ಸಂತೋಷ.

ಸಕ್ಸೇನಾ : ಅದ್ ಹೌದು.. ಅಂದೆಂತ ಒಂದು ಸ್ಪೆಶಲ್ ಐಟಂ ಬಾರಿ ಲ್ಯಾಕ್ ಇತ್ತ್...

ಮೇಯರ್ : ಹ್ಲಾಂ... ಅದಾ ಹೇಂಗಿತ್. ಅದ್..

ಸಕ್ಸೇನಾ : ಭಾರಿ ಲಾಯ್ಕ ಇತ್ತ್. ಎಂತ ಅದ್

ಬಿ.ಇ.ಓ : ನಮ್ಮೊರಿನ ಸ್ಪೆಶಲ್ ಡಿಶ್.. ಹ್ಹೆ..ಹ್ಹೆ... ಅದಕ್ಕೆ ನಮ್ಮೊರ್‌ಲಿ ಕೊಟ್ಟಿಗೆಂತೇಳುವೆ...

ಮೇಯರ್ : ಐ ಮೀನ್ ಎ.. ಕೈಂಡ್ ಆಫ್ ಇಡ್ಲಿ.. ಬಟ್

ನೋ ಇಡ್ಲಿ. ಕೊಟ್ಟಿಗೆ.. ಕೊಟ್ಟಿಗೆ ಎ ಕೈಂಡ್ ಆಫ್ ಘುಡ್ಡಿಂಗ್.

ಸಕ್ಸೇನಾ : ನಾವು ಊಟ ಮಾಡ್ದ್ ಆಸ್ಪತ್ರೆಲಿ ಅಲ್ಲಾ....

ಮೇಯರ್ : ಹೌದೌದು... ಆಸ್ಪತ್ರೆಲಿ...

ಸಕ್ಸೇನಾ : ತುಂಬಾ ಕ್ಲೀನಾಗಿತ್ತು... ಆದರೆ ಅಲ್ಲಿ... ಪೇಷೆಂಟೇ ಇತ್ತ್ಲೆ ಅಲ್ಲಾ...

ಡಾಕ್ಟರ್ : ಆಂ... ಆಂ... ಅರ್ಧ ಪೇಷೆಂಟ್ ಮನೆಗೆ.... (ಡಾಕ್ಟರ್ ತಡವರಿಸುತ್ತಾರೆ)

ಇಂಜಿನಿಯರ್ : (ಮಧ್ಯೆ ಬಾಯಿ ಹಾಕಿ) ಪೇಷೆಂಟ್ ಎಲ್ಲ ಗುಣ ಆಗಿ ಡಿಸ್ಚಾರ್ಜ್ ಆಗಿ ಹೋಗೊಳೊ. ಅಲ್ಲ ... ಇಲ್ಲಿ ಆಸ್ಪತ್ರೆ ವ್ಯವಸ್ಥೆ ಅಷ್ಟ್ ಲ್ಯಾಕುಟ್ಟು. ಡಾಕ್ಟ್ರು, ನರ್ಸ್‌ಗ.. ಬಾರಿ ಲ್ಯಾಕ್ ಟ್ರೀಟ್‌ಮೆಂಟ್ ಕೊಟ್ಟವೆ. ಇವ್ವೆ ಡಾಕ್ಟ್ರು.. ಎದುರಿಗೆ ಹೊಗ್‌ಳ್ದು ಸರಿ ಅಲ್ಲ...

ಸಕ್ಸೇನಾ : ಓ... ನಿಮ್ಮ ಹೆಸ್ರು..

ಡಾಕ್ಟರ್ : ಡಾಕ್ಟರ್ ಕುಂಞಿಕುಂಞಿ.....

ಸಕ್ಸೇನಾ : ಕುಂಯಿ.. ಕುಂಯಿ.. ವೆರಿಗುಡ್...

ಡಾಕ್ಟರ್ : ನೋ... ಕುಂಞಿಕುಂಞಿ...

ಸಕ್ಸೇನಾ : ಹ್ಞಾ... ಹ್ಞಾ... ಹ್ಞಾ...

ಮೇಯರ್ : ನೀವು ಆಸ್ಪತ್ರೆ ನೋಡಿ.... ಪಿ.ಡಬ್ಲ್ಯೂಡಿ ನೋಡಿ, ಎಜ್ಯುಕೇಶನ್ ನೋಡಿ..... ರೋಡ್.... ಪೊಲೀಸ್... ಯಾವುದೇ ಪಬ್ಲಿಕ್ ಸರ್ವೀಸ್ ನೋಡಿ... ಅಲ್ಲ, ನಾ ಬೇರೆ ಕಡೆ ನೋಡ್ದರ ಹೇಳ್ದು.. ಇಷ್ಟ್ ಸ್ಮೂತ್ ಆಗಿ... ಅಲ್ಲ, ನೀವ್ಗೆ ಗೊತ್ತಾಗದ್ದ್ ಎಂತ ಉಟ್ಟು..

ಅಲ್ಲ... ಇಷ್ಟೆಲ್ಲಾ ಇರೋಕು ಅಂತ ಹೇಳ್ರೆ.... ಐ ಮೀನ್.... ಈ ಮೇಯರ್ ಕೆಲ್ಸಂತೇಳ್ರೆ ಬಾರಿ ಬಂಜ. ಬೆಳಗ್ಗೆ ಎದ್ದರೆ ನೂರು ಕೆಲ್ಸ. ರೋಡ್ ಗುಡ್ಸಿಲ್ಲೆ.. ಬೀದಿ ದೀಪ ಇಲ್ಲೆ.. ಕುಡ್ಕರ ಗಲಾಟೆ ಐ ಮೀನ್... ಇಂಥಾ ಸಣ್ಣ ಸಣ್ಣ ಸಂಗತಿಂದ ಹಿಡ್ದ್... ಎಂತ ಉಟ್ಟು ಎಂತ ಇಲ್ಲೆ... ಇದರ ನಡುಲಿ ಈ ಎಲ್ಲ ತರ್ಲೆಗ.... ಅದ್ ಬುಡಿ... ಅದೆಲ್ಲ ಇದ್ದದೇ ನಮ್ಮ ಕರ್ತವ್ಯ.... ನಮ್ಮದ್ ಬೇರೆ ಅಲ್ಲ.... ಸಾರ್ವಜನಿಕ ಬೇರೆ ಅಲ್ಲ..... ಸಾರ್ವಜನಿಕ ಕೆಲ್ಸಂತೇಳ್ರೆ ದೇವ್ರ ಕೆಲ್ಸಂತಾ... ಅದೇ ರಾತ್ರಿ ಮಲ್ಗ್‌ಕನ ಒಮ್ಮೊಮ್ಮೆ.....

ಸಕ್ಸೇನಾ : ಓಹೋ.... ಹೋ.... ಆಧ್ಯಾತ್ಮ

ಮೇಯರ್ : ಅಲ್ಲಾ..

ಸಕ್ಸೇನಾ : ಆಧ್ಯಾತ್ಮ ಬೇಕು.. ಹಾಂಗೆ.. ನಾ.... (ಬಾಚಯ್ಯನ ಕಡೆ ನೋಡಿ) ಹೇಳ್ದಾಂಗೆ ನಿಮ್ಮ ಹೆಸ್ರ್, ಹೇಂಗೆ ಹೇಳಿ ಹಾಂ... ಬಾಚಯ್ಯ.. ಎಸ್. ಮೀ. ಬಾಚಯ್ಯ ನೀವ್ಗೆ ಇಸ್ಪೇಟ್ ಆಡಿಕೆ ಗೊತ್ತುಟ್ಟಾ...

ಮೇಯರ್ : ಚೇ...ಚೇ.. ಸಾರ್.. ಇಸ್ಪೀಟ್ ಇಡೀ ಟೌನ್‌ಲೇ ಬ್ಯಾನ್ ಮಾಡ್ಯೋಳೊ. ಅದರ್ಲಿ ನಮ್ಮ ಇನ್ಸ್‌ಪೆಕ್ಟ್ರ ಬಾರೀ ಸ್ಟ್ರಿಕ್ಟ್... ಇಸ್ಪೇಟ್ ಎಲೆ ಕಂಡರೆ ನನ್ನ ರಕ್ತ ಕೊದ್ದದೆ.. (ಸಕ್ಸೇನಾಗೆ ಅಮಲು ಪ್ರಾರಂಭವಾಗಿದೆ)

ಸಕ್ಸೇನಾ : ಹ್ಞಾಂ... ಹ್ಞಾಂ ಮಹಾತ್ಮರ್ ನೀವು.. ಒಳ್ಳೆ

ಮಾತ್ ಹೇಳ್ದರಿ... ನಾನ್‌ಸೆನ್ಸ್... ಇಸ್ಟೇಟ್ ಬರೇ ನಾನ್ಸೆಸ್.. ಒಂದ್ ರೌಂಡ್‌ಲೀ ಬಂದದೆ... ಇನ್ನೊಂದು ರೌಂಡ್ಲಿ ಹೋದೆ. ಅದೃಷ್ಟ ಬೇಕು. ಐ ಮೀನ್ ಅದೃಷ್ಟ... ಅದೃಷ್ಟ....

(ಕಾವೇರಿ ಮೋನಿಕಾ ಪ್ರವೇಶ. ಸಕ್ಸೇನಾ ಆಶ್ಚರ್ಯದಿಂದ ಅವರನ್ನೇ ನೋಡುತ್ತಾನೆ)

ಮೇಯರ್ : ಸಾರ್... ಹೀ..ಹೀ.. ಇವರು ನಮ್ಮ ಮಿಸೆಸ್.. ಐ ಮೀನ್ ಕಾವೇರಿಯಮ್ಮ... ಆ್ಯಂಡ್ ಮೈ ಡಾಟರ್ ಮೋನಿಕಾ

ಸಕ್ಸೇನಾ : ಗುಡ್.. ಗುಡ್.... ನಮಸ್ಕಾರ ನಮಸ್ಕಾರ ಸಂತೋಷ ತುಂಬಾ ಸಂತೋಷ.....

ಮೋನಿಕಾ : ಎಕ್ಸ್‌ಕ್ಯೂಸ್ ಮೀ ಸಾರ್... ತಮ್ಮಂಥವ್ರೂ....

ಸಕ್ಸೇನಾ : ಓ್ಹ.... ಬಾರಿ ಪೋಲ್ರ್ಯು ಮಾತಾಡ್ತ್ಯರಿ... ಐ ಲೈಕ್ ಇಟ್...

ಮೋನಿಕಾ : ಎಕ್ಸ್‌ಕ್ಯೂಸ್ ಮೀ ಸಾರ್.... ಹಾಂಗೆ ಬಹುವಚನಲಿ ಕರೆಬಡಿ

ಮೇಯರ್ : ನಾಚಿಕೆ... ನಾಚಿಕೆ... ಹ್ಹೆ..ಹ್ಹೆ.....

ಕಾವೇರಿ : ಕುದ್ರಿ ಸಾರ್..... ಪ್ಲೀಸ್ ನಿತ್ತ್‌ಕಂಡೇ ಒಳರಿ... ಕುದ್ರಿ ನಿಮ್ಮಂಥವು ನಮ್ಮ ಮನೆಗೆ ಬಂದದೇ ದೊಡ್ಡ ಪುಣ್ಯ

ಸಕ್ಸೇನಾ : (ಮೋನಿಕಾಳನ್ನು ನೋಡಿ) ಎಸ್... ನಿಮ್ಮೆದುರು ಕುದ್ದ್‌ಕಂಬದೇ ಒಂದು ಪುಣ್ಯ..

ಕಾವೇರಿ : ಅಯ್ಯೋ.. ಅಯ್ಯೋ ಹಾಂಗೆ ಹೇಳ್ರೆ ಹೇಂಗೆ..

ಮೋನಿಕಾ : ಚೇ... ಚೇ... ನೀವು ರಾಜಧಾನಿಂದ ಬಂದೊವು. ಈ ವಿಲೇಜ್.....

ಸಕ್ಸೇನಾ : ವಿಲೇಜ್... ಓ.ಕೆ ವಿಲೇಜ್ ನಂಗೆ ಬಾರಿ ಇಷ್ಟ... ತುಂಬಾ ಖುಷಿಯಾದೆ (ಮೋನಿಕಾಳನ್ನು ನೋಡುತ್ತಾ) ಈ ಬೆಟ್ಟ ಗುಡ್ಡ ಕಣಿವೆ ಐ ಮೀನ್ ಅಪ್ಸ್ ಆ್ಯಂಡ್ ಡೌನ್ ಸೂಪರ್ ನೋಡ್ದಷ್ಟೂ ಸಾಕಾದುಲೇ. ಹಾಂಗೇ ರಾಜಧಾನಿನೂ ಪೊರ್ಲುಜ ಇಲ್ಲೆಂತ ಅಲ್ಲ... ಅಲ್ಲಿ ರಾಜಧಾನಿಲಿ ನಾ ಒಬ್ಬ ಲಾಟ್‌ಪೋಟ್ ಗುಮಾಸ್ತಂತ ಗ್ರೇಸ್‌ಬಡಿ (ಗ್ರಹಿಸಬೇಡಿ) ನಾ... ಒಂಥರಾ ಷೋಕಿ ಮನ್ಶ. ದಿಲ್ದಾರ್... ಕಲೆ, ಸಂಸ್ಕೃತಿ ನಂಗೆ ಬಾರಿ ಇಷ್ಟ.... ನಮ್ಮ ಬಾಸ್ ಒಮ್ಮೊಮ್ಮೆ ನನ್ನ ಡಿನ್ನರ್‌ಗೆ ಕರ್ದವೆ.. ನಮ್ಮ ಡಿಸ್ಕಷನ್ ಎಲ್ಲಾ ಹೆಚ್ಚಾಗಿ ಅಲ್ಲೆ... ಅವು ಒಮ್ಮೆ ನಂಗೆ ದೊಡ್ಡ ಪ್ರಮೋಷನ್ ಕೊಟ್ನೆಂತ ಹೇಳ್ದೊ... ನಾನೇ ಬೇಡಾಂತ ಹೇಳ್ದೆ.. (ಆಗ ಗುಡ್ಡಪ್ಪ ಬಾಟಲಿಗಳೊಂದಿಗೆ ಪ್ರವೇಶಿಸಿ, ಮಧ್ಯ ಸುರಿದು ಕೊಡುತ್ತಾನೆ.)

ಸಕ್ಸೇನಾ : (ಕುಡಿಯುತ್ತಾ) ಗುಡ್ಡಪ್ಪ... ನೀವೂ ತಕಣಿ....

ಗುಡ್ಡಪ್ಪ : ಹ್ಞೆ...ಹ್ಞೆ.. ನಂಗೆ ಬೇಡ ನೀವು ತಕಣಿ...

ಸಕ್ಸೇನಾ : (ಮೇಯರ್‌ಗೆ) ನೀವೂ ಕುದ್ರಿ... ಬನ್ನಿ

ಮೇಯರ್ : ಚೇ..ಚೇ... ನೀವು ತಕಣಿ ಸಾರ್ ನಿಮ್ಮೆದ್ರ್ ನಾವು ಕುದ್ರುದಾ....

ಇಂಜಿನಿಯರ್ : ನೋ... ಸಾರ್... ನೋ.. ನೋ...

ಎಜ್ಯುಕೇಶನ್ : ಯಾವ್ದಕ್ಕೂ ಒಂದ್ ಸ್ಥಾನಾ..... ಮಾನಾಂತ ಉಟ್ಟಲ್ಲ...

ಸಕ್ಸೇನಾ : ಈ ಸ್ಥಾನ...ಮಾನ.... ಗೌರವ... ಇದೆಲ್ಲ ಸುಳ್ಳು ಮಾರಾಯ್ರು.. ಆದರೂ ನನ್ನ ಮೋರೆ ನೋಡ್ದಕೂಡ್ಲೆ... ಎಲ್ಲವ್ರೂ ಬಾರಿ ಮರ್ಯಾದಿ ಕೊಟ್ಟವೆ. ಅದ್ ಸುಳ್ಳಲ್ಲ ಹ್ಹ.. ಹ್ಹ..ಹ್ಹ... (ನಗು ನಿಲ್ಲಿಸಿ) ನೀವ್ಗೆ ಗೊತ್ತುಟ್ಟಾ.. ಒಂದ್ ಸರ್ತಿ ಒಬ್ಬ ನನ್ನ ನಾ ದೊಡ್ಡ ಸಾಹಿತಿ ಅಂತ ತಿಳ್ಕಂಡು ಬುಟ್ಟಿದ್ದೊಹ್ಹ.. ಹ್ಹ... ಹ್ಹ...

ಕಾವೇರಿ : ಹೌದಪ್ಪ ... ಖಂಡಿತಾ.... ಅಂಥಾ ಕಳೆ ಉಟ್ಟು ನಿಮ್ಮ ಮೋರೆಲಿ

ಮೋನಿಕಾ : ಕವನ, ಕವಿತೆ, ಆರ್ಟ್, ಕಲ್ಚರ್ ಎಲ್ಲ ಉಟ್ಟು ನಿಮ್ಮಲ್ಲಿ... ವಾವ್ಹ್....

ಎಲ್ಲರೂ : ಹೌದೌದು... ಎಲ್ಲಾ ಉಟ್ಟು...

ಸಕ್ಸೇನಾ : ಎಸ್., ಇಲ್ಲೆಂತಲ್ಲ. ನಂಗೆ ತುಂಬಾ ಸಿನೆಮಾ ಆ್ಯಕ್ಟರ್‌ಗಳ ಗುರ್ತ ಉಟ್ಟು.. ಈ ಸೋಪು, ಪೇಸ್ಟ್, ಪಾನ್, ಗುಟ್ಕ, ಕಾಫಿ, ಚಾಯ ಜಾಹೀರಾತ್‌ಲಿ ಬಂದವೆಲ ಅವೆಲ್ಲ ನಮ್ಮ ಕ್ಲೋಸ್ ಫ್ರೆಂಡ್ಸ್.. ನಮ್ಮ ಕುಟುಂಬನೇ ಹಾಂಗೇ..... ನನ್ನಪ್ಪ ಮತ್ತೇ.. ಪದ್ಯ ಬರೆತಿದ್ದೊ... ಈ ರಬೀಂದ್ರನಾಥ್ ಟಾಗೋರ್ ನಮ್ಮಪ್ಪನ ದೋಸ್ತಿ.. ಬಾರೀ ದೋಸ್ತಿಗ...

ಕಾವೇರಿ : ತುಂಬಾ ದೊಡ್ಡ ಫ್ಯಾಮಿಲಿ... ಇರೊಕು

ನಿಮ್ಮದ್. ಮನೆಯವು ನೆಂಟ್ರ.. ಬಂಧು... ಬಳಗ....

ಮೋನಿಕಾ : ತುಂಬಾ ಪ್ರೆಂಡ್ಸ್ ಸಹ ಇರುವ್ರೋ...

ಸಕ್ಸೇನಾ : ಹ್ಞಾಂ.. ಹ್ಞಾ.. ತುಂಬಾ ಒಳೊ (ನೆನಪಿಸುತ್ತಾ) ಅಮಿತಾಬ್ ಬಚ್ಚನ್, ಧರ್ಮೇಂದ್ರ, ಹೇಮಮಾಲಿನಿ ಗವಾಸ್ಕರ್, ಕಪಿಲ್‌ದೇವ್, ಕಾರ್ನಾಡ್, ಟಾಟಾ, ಬಿರ್ಲಾ, ಕೊಹ್ಲಿ......

ಕಾವೇರಿ : ತಮ್ಮ ಮನೆ ...

ಮೋನಿಕಾ : ನೋ ತಮ್ಮ ಬಂಗ್ಲೆ..

ಸಕ್ಸೇನಾ : ಹಾಂ.. ನಮ್ಮ ಬಂಗಲೆ ಎದುರೇ ಫ್ರಾನ್ಸ್ ಅಂಬಾಸಡರ್ ರೆಸಿಡೆನ್ಸ್... ಆಚೆ ಅಮೇರಿಕಾ ಅಂಬೆಸಿ... ಆಗಾಗ ನಾವು ಒಟ್ಟಿಗೆ ಪಾರ್ಟಿ ಮಾಡುವೆ. ಅವು ನನ್ನ ಕರ್ದವೆ.. ನಾನೂ ಅವರ ಕರ್ದನೆ. ರಾಜಕೀಯದವು ಬಂದ್‌ಕಂಡೇ ಇದ್ದವೆ... ಮೀ. ಸಕ್ಸೇನಾ ಹಾಂಗಾತ್ ಹಿಂಗಾತ್ ಎಂತ ಮಾಡ್ದು ಅಂತ... ಸಜೆಷನ್... ಅವ್ಕೆ ಹಾಂಗೆ ಮಾಡಿ ಹೀಂಗೆ ಮಾಡಿಂತ ನಾ ಸಜೆಷನ್ ಕೊಟ್ಟರೆ ಅವ್ಕೆ ಬಾರಿ ಕುಸಿ....

(ತೂರಾಡುತ್ತಾನೆ. ಸ್ವಲ್ಪ ಹೊತ್ತು ಗಾಢ ಮೌನ. ನಂತರ ಒಬ್ಬೊಬ್ಬರನ್ನೇ ನೋಡುತ್ತಾ)

ಸಕ್ಸೇನಾ : ಹೇ.... ವಾಟ್ ಹೇಪ್ಪಂಡ್.. ಎಂತ ಸಂಗತಿ. ಯಾರೂ ಮಾತಾಡ್ದುಲೆ... ಹ್ಞಾಂ ಒಮ್ಮೆ ಪಿ.ಎಂ ನನ್ನ ಮನೆಗೆ ಜನ ಕಳ್ಸಿ ಬಾಕೆ ಹೇಳ್ದೋ "ಲುಕ್ ಸಕ್ಸೇನಾ ಇದು ಬಾರಿ

ಸೀಕ್ರೇಟ್ ಫೈಲ್‌ಂತೇಳಿ ಒಂದು ಫೈಲ್ ಎದುರಿಗೆ ಇಸಿದ್ರೋ... ಎಸ್... ಅವು ನನ್ನ ಸ್ಕೂಲ್‌ಮೇಟ್.. ಡೂನ್ ಸ್ಕೂಲ್.. ಬಾರೀ ವಿಶ್ವಾಸ... ಹೇಳ್ದೋ ಐ.ಎ.ಎಸ್, ಐ.ಪಿ.ಎಸ್, ಹೆಗ್ಗಣಗ ತುಂಬಿದ್ದ ಡಿಪಾರ್ಟ್‌ಮೆಂಟ್. ಕೋಟಿ ಕೋಟಿ ತಿಂದೊಳೊ... ಇದರ ಹೇಂಗಾರ್ ಮಾಡಿ ಸರಿ ಮಾಡಿದಿದ್ದರೆ ಭಾರತದ ಮರ್ಯಾದೆ ಹೋದೆ. ನೀ ಹೆಂಗಾರ್ ಮಾಡಿ ಸರಿ ಮಾಡೊಕುಂತ ಹೇಳ್ದೋ... ಸೀಕ್ರೇಟ್ ಎಂಕ್ವೇರಿ.. ಬರೇ ಒಂದ್ ತಿಂಗಳ್‌ಲಿ ಎಂಟ್ ಜನ ಸಿಕ್ಕಿ ಹಾಕಂಡೊ... ಡೈರೆಕ್ಟ್ ತಿಹಾರ್‌ಜೈಲಿಗೆ ಆಮೇಲೆ ಈ ಸಕ್ಸೇನಾಂತೇಳ್ರೆ ಸಾಕ್ ಗಡಗಡಂತ ನಡ್ಗುವೆ... ನಾಂತೇಳ್ರೇ.. ಡೆಲ್ಲಿಲಿ ಸಿಂಹಸ್ವಪ್ನ (ಅಮಲು) ಹಾಂ ... ಹಾಂ... ಸ್ವಪ್ನ... (ಸ್ವಲ್ಪ ತಡೆದು) ಆದರೂ ನಾ ಬಾರಿ ಸಾಧುಪ್ರಾಣಿ... ಹಸ್... ಹಸ್ ಇದ್ದ ಹಾಂಗೆ.. ಒಳ್ಳೆದು ಮಾಡ್ರೆ.. ಒಳ್ಳೆದ್ ಏನಾರ್ ಕೆಟ್ಟದ್ ಮಾಡ್ರೆ.. ನಂಗೆ ಕ್ಯಾರೇ ಇಲ್ಲೇ... ಅಲ್ಲೇ ಮಟಾಷ್... ನಂಗೆ ಯಾವ ಆಸೆನೂ ಇಲ್ಲೆ... ಪ್ರಮೋಶನ್ ಬೇಡ... ಎಂತದ್ದೂ ಬೇಡ (ತೂರಾಡುತ್ತಾ ಬೀಳುವ ಸ್ಥಿತಿ. ಮೇಯರ್ ಮತ್ತಿತ್ತರು ಹಿಡಿದುಕೊಂಡು ಹೋಗಿ ಕುರ್ಚಿಯಲ್ಲಿ ಕೂರಿಸುತ್ತಾರೆ)

ಸಕ್ಸೇನಾ : ಎಸ್... ಇಷ್ಟು ಸಾಕು.. ಒಂದು ಕುರ್ಚಿ.. ಟೇಬಲ್ ನಂಗೆ ಈ ಪೋಸ್ಟ್.. ಸಾಕ್ (ಟೇಬಲ್‌ಗೆ ತಲೆ ಅನಿಸುತ್ತಾನೆ.)

ಮೇಯರ್ : (ನಿಧಾನಕ್ಕೆ ಹತ್ತಿರ ಹೋಗಿ) ಸಾರ್....

ಎಂಜಿನಿಯರ್ : ಸಾರ್...

ಇತರರು : ಸಾರ್..... (ಸುದ್ದಿಯೇ ಇಲ್ಲ ಎಂಬಂತೆ ಸಂಜ್ಞೆ)

ಕಾವೇರಿ : ಹತ್ತಿರ ಹೋಗಿ) ಸಾರ್.... ಸಾರ್....

ಮೋನಿಕಾ : ಸಾರ್.... ನಿದ್ದೆ ಬಂತಾ....

ಸಕ್ಸೇನಾ : (ತಟ್ಟನೆ ಮುಖ ಎತ್ತಿ) ಸ್ವೀಟ್ ವಾಯ್ಸ್... ಎಸ್... ಗುಡ್‌ನೈಟ್.. ಸ್ವೀಟ್ ಲೇಡೀಸ್.... ಸ್ವೀಟ್ ಡ್ರೀಮ್‌ಗುಡ್ ನೈ... ಟ್... (ಮತ್ತೆ ನಿದ್ರೆ)

(ಮೇಯರ್ ಮತ್ತಿತರರು ಆತನನ್ನು ಎತ್ತಿಕೊಂಡು ಒಳಗೆ ಹೋಗುತ್ತಾರೆ)

ಬಾಚಯ್ಯ : ಸಾಹೇಬ್ರ್ ಭಯಂಕರ ಮಾರ್‍ರೆ....

ದೋಚಯ್ಯ : ಬಾಚಯ್ಯ ಹ್ಞೆ.. ಹ್ಞೆ... ಹ್ಞೆ...

ಬಾಚಯ್ಯ : ಸಾಹೇಬ್ರ್‌ಂತೇಳ್ರೆ ಸಾಹೇಬ್ರೆ...

ದೋಚಯ್ಯ : ಅದೆಂತ ಗತ್ತ್.... ಅದೆಂತ ಗಾಂಭೀರ್ಯ.....

ದೋಚಯ್ಯ : ಮತ್ತೇ ಸುಮ್ಮನೆನಾ....

ಬಾಚಯ್ಯ : ಆಫೀಸರ್‌ಂತೇಳ್ರೆ.. ಹೀಂಗೆ ಇರೊಕು. ಇದ್.... ಟೇಬಲ್ ಎದುರ್ ಕುರ್ಸಿಲಿ ಕುದ್ದ್ ಕೈ ಒಡ್ಡೊವೆಲ್ಲ ಆಫೀಸರ್‌ಗಳಾ... ಇದ್ ನೋಡಿ ಅಫೀಸರ್...

ದೋಚಯ್ಯ : ಅಲ್ಲಾ... ಈ ಮ್ಯಾಜಿಸ್ಟ್ರೇಟ್ ಎಲ್ಲಿ ತಪ್ಪಿಸ್ಕಂಡು

ಬುಟ್ಟೊ...

ಬಾಚಯ್ಯ : ಅದೂ... ಅದೇ ತರದ್ದ್. ಬರೇ ಕಳ್ಳ....

ದೊಚಯ್ಯ : ಹೌದ್.. ಮಾರಾಯನ.... ಎದ್‌ರ್‌ಗೆ ಹೇಳ್‌ವಂಗೆ ಇಲ್ಲೆ.. ಹೋಗಿ ಹೇಳೊಮೊ... ಈಗಾದರೂ ಬಂದ್ ನೋಡ್ಕಂಡ್ ಹೊಗಲಿ.

ಬಾಚಯ್ಯ : ಪೋಯಿ ಪೋಯಿ, ಹಾಂಗೆ ಅಂಗಡಿ ಕುಶಾಲಪ್ಪನು ಕಾದ್‌ಕಂಡ್ ಇರ್ದ್ದು... ಅವಂಗು ಸುದ್ದಿ ಮುಟ್ಸೊಕು...

ದೋಚಯ್ಯ : ಅಮ್ಮ ಬಂದವೆ..

ಬಾಚಯ್ಯ : ಬಂದವೆ ಅಮ್ಮ... ಮೇಯರ್‌ಗೆ ಹೇಳಿಬುಡಿ.. (ಇಬ್ಬರು ನಿರ್ಗಮನ)

(ಇಂಜಿನಿಯರ್, ಎಜ್ಯುಕೇಶನ್ ಆಫೀಸರ್, ಡಾಕ್ಟರ್ ಪ್ರವೇಶ)

ಇಂಜಿನಿಯರ್ : ಊಟದ ವ್ಯವಸ್ಥೆ ಮಾಡ್‌ದ್ ಒಳ್ಳೆದಾತ್... ಇಲ್ಲದಿದ್ದರೆ...

ಎಜ್ಯುಕೇಶನ್ : ಅಲ್ಲ.. ಎಂತಂತಂತೇಳ್ರೆ.... ಮಾತಾಡ್ಕನ ಯಾಕೋ....

ಇಂಜಿನಿಯರ್ : ಹ್ಹೆ...ಹ್ಹೆ.... ಅದ್ ಎಣ್ಣೆ ಸೇವೆ... ಹ್ಹೆ...ಹ್ಹೆ.. ಸರಿ ಬಿದ್ದುಟು... ಹಾಂಗೆ ಸಾಯೇಬ್ರ್ ಒಳ್ಳೆ ಫಾರ್ಮ್‌ಲಿ ಇದ್ದ...

ಡಾಕ್ಟರ್ : ಹ್ಹು....ಹ್ಹು.... ಹ್ಹು.... ಎಡ ಈ ಪೀಡರ್‌ಸ್ಕಾಡ್ ಉಂಡಲ್ಲವೊ ಬೆಸ್ಟ್‌ಕ್ವಾಲಿಡಿ. ನಲ್ಲೆ ಸ್ಟೆಬಿಳೈಜರ್...

ಎಜ್ಯುಕೇಶನ್ : ಓ... ಮಾರ್ರೆ.... ನಮ್ಮ ವೈದ್ಯರಿಗೆ ಯಾರದ್ರ್

ಸ್ವಲ್ಪ ಕನ್ನಡಕಲ್ಸಿ ಮಾರ್ರ್ರೆ....

ಎಂಜಿನಿಯರ್ : ಸರಿ.. ಸರಿ.... ನಾವು ಪೋಯಿ...ಇನ್ನು ಕೆಲ್ಸ ಉಟ್ಟಿಲ್ಲ... ಅಮ್ಮ ನಾವು ಬಂದವೆ...

ಎಜ್ಯುಕೇಶನ್ : ಕಾವೇರಮ್ಮ ನಾವು ಹೊರ್ಟವೆ

ಡಾಕ್ಟರ್ : ಗಾವೇರಿಯಮ್ಮ ಅವನಿಗೆ ಏಳಿಬಿಡು. ನಾವು ಬರ್ತದೆ...

(ಎಲ್ಲರೂ ನಿರ್ಗಮನ. ಕಾವೇರಿ ಮೋನಿಕಾ ಪ್ರವೇಶ)

ಕಾವೇರಿ : ಎಲಾ... ಆಫೀಸರ್ ಎಂತ ದೊಡ್ಡ ಮನ್ಶ

ಮೋನಿಕಾ : ಎಷ್ಟ್ ಲಕ್ಷಣ ಅಲಾ... ಮಮ್ಮಿ..

ಕಾವೇರಿ : ಬಾರಿ ಸುಸಂಸ್ಕೃತ... ಓದ್ಯೊಳೊ... ಬರ್ದೊಳೊ.... ರಾಜಧಾನಿಲಿ ದೊಡ್ಡ ಕೆಲ್ಸ ದೊಡ್ಡ ಸಂಸಾರ. ಎಂತ ಕಥೆ... ಅಲ್ಲಾ... ಅವರ ತೇಜಸ್ಸ್ ಗಾಂಭೀರ್ಯ ನಂಗಂತು ನೋಡ್ಕಂಡೇ.. ಇರೋಕುಂತ ಅನಿಸ್‌ತಿತ್....

ಮೋನಿಕಾ : ಆದರೆ ಅವರ ಕಣ್ಣ್ ಮಾತ್ರ ನನ್ನ ಮೇಲೆ ಇತ್...

ಕಾವೇರಿ : ನಿನ್ನ ತಲೆ.. ನಾಚಿಕೆ ಆದ್‌ಲೆನಾ... ನಿಂಗೆ.... ನಿನ್ನನ್ನೇ ನೋಡಿಕೆ ಅದ್..

ಮೋನಿಕಾ : ಮತ್ತೆಂತ ಅವು ನಿನ್ನ ನೋಡಿಕಂಡ್ ಇದ್ದೊನಾ...

ಕಾವೇರಿ : ಜಾಸ್ತಿ ಮಾತಡ್ಬಡ.. ಬೊಗಳಾದೆ (ಮಾತನಾಡದೆ) ಒಳಗೆ ನಡಿ...

(ಆಗ ಮೇಯರ್ ಪ್ರವೇಶ)

ಮೇಯರ್ : ಶ್ಶ್...... ಎಂತ ಗಲಾಟೆ ನಿಮ್ಮದ್... ಒಳಗೆ ಆಫೀಸರ್ ಮಲ್ಗಿಯೊಳೊ...

ಕಾವೇರಿ : ಅಲ್ಲಾ ಎಂತಾತ್ ಈಗ.. ನಿಮ್ಮದೊಂದು..

ಮೋನಿಕಾ : ಮಮ್ಮಿಗೆ ಬಾರಿ ಅರ್ಜೆಂಟ್

ಕಾವೇರಿ : ನಿ.. ಸುಮ್ಮಂಗಿರ್... ನಿನ್ನೊಟ್ಟಿಗೆ ಯಾರ್ ಕೇಳ್ದೊ..

ಮೇಯರ್ : ಲುಕ್.. ಹಿಯರ್.. ಅಲ್ಲಾ ಅವು ಹೇಳ್ದ್ ಪೂರಾ... ಸತ್ಯ ಅಲ್ಲದಿರ್ದು. ಆದರೂ ಐ ಮೀನ್ ಅವು ಸುಳ್ಳು ಯಾಕೆ ಹೇಳ್ವೆ. ಅಗತ್ಯ ಇಲ್ಲೆ.. ಈ ಕುಡ್ವಾಕನ ಎಲ್ಲ ಸತ್ಯ ಹೊರಗೆ ಬಂದದೆ. ಸುರುಗೆ ಬರೇ ಲಾಟ್‌ಪೋಟ್ ಮನ್ಸನ ಹಾಂಗೆ.. ನಾಟಕ ಮಾಡ್ದೊ.. ಕುಡ್ವಾಕನ ಎಲ್ಲ ಹೊರಗೆ ಬಾತ್... ಎಷ್ಟ್ ದೊಡ್ಡ ಆಫೀಸರ್..

ಕಾವೇರಿ : ಅಲ್ಲಾ.... ಅವರ ಬಂಧು.. ಬಳಗ... ಮನೆತನ...

ಮೇಯರ್ : ಲುಕ್ ಹಿಯರ್... ನೀ.. ಏನ್ ಸಂಬಂಧ ಮಾಡಿಕೆ ಹೊರ್ಟಳನ. ಅವು ಆಫೀಸರ್ ಯಾ.. ದೊಡ್ಡ ಆಫೀಸರ್....

ಕಾವೇರಿ : ಅಲ್ಲಾ... ಅದ್ ನಂಗೂ ಗೊತ್ತುಟ್ಟು.... ಆದರೂ

ಮೇಯರ್ : ನಿನ್ನ ಹಕ್ಕಲೆ.. ಮಾತಡ್ದೂ ಒಂದೆ....

ಮೋನಿಕಾ : ಕೆಸರಿಗೆ ಕಲ್ಲ್ ಹಾಕುದೂ ಒಂದೆ.....

ಕಾವೇರಿ : ನೀ ನಡುಲಿ ಬಾಯಿ ಹಾಕ್ಬಡ...

(ಒಳಗಿಂದ ತಿವಾರಿ ಪ್ರವೇಶಿಸಿ ಸಣ್ಣ ಕೆಮ್ಮು)

ಕಾವೇರಿ : ಓ.... ಬನ್ನಿ ಬನ್ನಿ...

ಮೇಯರ್ : (ಕಾವೇರಿಗೆ).. ಶ್ಯ್... (ತಿವಾರಿಗೆ)

ಸಾಯೇಬ್ರಿಗೆ ನಿದ್ದೆ ಬಾತಾ...

ತಿವಾರಿ : ಗೂರುವೆ..

ಕಾವೇರಿ : ಅಪ್‌ಕೆ ನಾಮ್‌ಕ್ಯಾ ಹೇ....

ತಿವಾರಿ : ತಿವಾರಿ.. ಮೇಮ್ ಸಾಬ್..ಅತುಲ್‌ರಾಮ್ ಅನಂತ್‌ರಾಮ್ ತಿವಾರಿ

ಮೇಯರ್ : ಮತ್ತೆ... ಬಂಧು ಬಳಗಂತೇಳಿ ಸಂಬಂಧ ಮಾತಡಿಕೆ ಸುರು ಮಾಡ್ಬೇಡಾ... (ತಿವಾರಿಗೆ) ನಿಮ್ಮದ್ ಊಟ ಆತಾ... ಊಟ ಹೇಗಿಂತ್...

ತಿವಾರಿ : ಬಹುತ್ ಅಚ್ಚಾ ಹೇ... ಫಸ್ಟ್ ಕ್ಲಾಸ್... ಒಳ್ಳೆ ಊಟ...

ಕಾವೇರಿ : ಅಲ್ಲಾ... ನಿಮ್ಮ ಸಾಯೇಬ್ರು.... ಬಂಧು ಬಳಗ... ಮನೆತನ......

ಮೇಯರ್ : (ಕಾವೇರಿಗೆ) ಲುಕ್ ಹಿಯರ್ ಸುಮ್ಮನೇ ಇದ್ದಿಯನೋ ಇಲ್ಲೇನೊ.... ಒಳಗೆ ಹೋಗ್... ಮಿ. ತಿವಾರಿ ನಿಮ್ಮ ಸಾಯೇಬ್ರೂ ಬಾರೀ ಸ್ಟ್ರಿಕ್ಟಾ.... ಅಥವಾ ಏನಾದ್ರ...

ತಿವಾರಿ : ಬಾರಿ... ಖಡಕ್... ಎಲ್ಲ ಅವು ಹೇಳ್ದಂಗೆ ಆಕು...

ಮೇಯರ್ : ಮತ್ತೆ ಅವರ ವ್ಯವಸ್ಥೆ ಎಲ್ಲಾ ನೀವೇ ನೋಡಿಕಂಬೋದಲ್ಲ...

ತಿವಾರಿ : ಹೌದೌದು... ನಾನೇ ಪಿ.ಎ ಸೆಕ್ರಟರಿ ಎಲ್ಲ...

ಮೇಯರ : ಐ ಸೀ.... ಮಿ. ತಿವಾರಿ.... ಐ.. ಮೀನ್.. ಏನೂ ತಪ್ಪು ತಿಳ್ಕಂಬಡಿ. ನೀವ್ಗೆ.. ಈ ಊರ್‌ಲಿ ಏನಾರ್ ಹಣದ ತೊಂದರೆ ಮನಿ ಇದ್ದರೆ ಹೇಳಿಬುಡಿ... ಯಾಕೊ..

ಆಗ ಸಾಯೇಬ್ರ್ ಹೇಳ್ದಂಗೆ ಇತ್ತ್.... ಐ ಮೀನ್ ಬೇಕರೆ ಸ್ವಲ್ಪ ದುಡ್ಡು ಇಸಿಕಣಿ... (ದುಡ್ಡು ಕೊಡುತ್ತಾನೆ.)

ತಿವಾರಿ : ಥ್ಯಾಂಕ್ಸ್... ತುಂಬಾ ಥ್ಯಾಂಕ್ಸ್.... ತುಂಬಾ ಉಪಕಾರ ಅತ್...

ಮೇಯರ್ : ಅಯ್ಯೊಯೋ... ಚೇ..ಚೇ... ಹಂಗೆಲ್ಲ ಹೇಳ್‌ಬಡಿ..

ಕಾವೇರಿ : ಇದ್... ನಿಮ್ಮ ಸಾಯೇಬ್ರಿಗೆ ಮಾರ್‍ಯೇಜ್ ಅಗುಟಾ..

ಮೇಯರ್ : ನಿಂಗೆ.. ಸುಮ್ಮಂಗೆ ಇರಿಕೆ ಆದ್ಲೆನಾ.. ನಾವ್ಗೆ ಇಲ್ಲಿ ಸಾವು ಬದ್‌ಕ್‌ನ ಪ್ರಶ್ನೆ... ನಿಂಗೆ ಮದುವೆ ಚಿಂತೆ... ರಗಳೆ... (ತಿವಾರಿಗೆ) ಐ ಮೀನ್ ಇಂದ್‌ನ ಊಟ ಫಾರ್ಟಿ, ಸಾಯೇಬ್ರಿಗೆ ಖುಷಿ ಅತ...

ತಿವಾರಿ : ಹಾ... ಹಾ... ಅಚ್ಚಾ ಲಗಾ... ಬಾರಿ ಲಾಯಿಕ್ ಇತ್.. ಅವುಕೆ ಒಂದ್ ಅಭ್ಯಾಸ. ತಿವಾರಿ ಕೈ ಸಾಹೇ... ಅಂತ... ನಾ ಬಹುತ್ ಖರಾಬ್ ಅಂತ ಹೇಳ್ದೆ... ಅಂತ ಇಸಿಕಣಿ.... ಆಂದ್ರೆ ನಿಮ್ಮದಲ್ಲ.... ಬಹುತ್ ಖರಾಬ್‌ತೇಂಕ್ರೆ ಸಾಕ್. ಅದರ ನೋಟ್ ಮಾಡಿಕಂತ ಹೇಳ್‌ವೆ. ಮತ್ತೆ ನೆನ್‌ಪ್ ಮಾಡ್‌ಂತ ಹೇಳ್ವೆ... ಬಾರಿ ಸ್ಟ್ರಿಕ್ಟ್ .... (ಒಳಗಿನಿಂದ ಸಕ್ಸೇನಾ ಕೆಮ್ಮಿದ ಶಬ್ದ)

ತಿವಾರಿ : ಓ... ಸಾಯೇಬ್ರು ಎದ್ದೊ... (ಒಳಗೆ ಹೋಗುತ್ತಾನೆ)

(ಹೊರಗಿನಿಂದ ಕಾನ್ಸ್‌ಟೇಬಲ್ ಬಂದು ಸೆಲ್ಯೂಟ್ ಹೊಡೆಯುತ್ತಾನೆ)

ಮೇಯರ್ : ನೀನು ಎಲ್ಲಿ ಹೋಗಿದ್ದ ....

ಕಾನ್ಸ್‌ಟೇಬಲ್ : ಊಟಕ್ಕೆ

ಮೇಯರ್ : ಲುಕ್ ಹಿಯರ್... ನಿಂಗೆ ಸಾವಿರ ಸರ್ತಿ ಹೇಳಿಯಳೆ... ಹೇಳದೆ ಹೋಕೆ ಬೊತ್ತುಂತ... ನೀವೆಲ್ಲ ನನ್ನ ಧರ್ಮಸಂಕಟಕ್ಕೆ ಸಿಕ್ಕಿಸಿಯರಿ...

ಕಾನ್ಸ್‌ಟೇಬಲ್ : ಇಲ್ಲೆ.. ಸಾರ್ ಇಲ್ಲೆ...

ಮೇಯರ್ : ಇದರ ಎಡೆಲಿ ಯಾರೂ ಬಾತ್ಲೆ ಅಲ್ಲ...

ಕಾನ್ಸ್‌ಟೇಬಲ್ : ಇಲ್ಲೆ.. ಸಾರ್ ಯಾರೂ ಬಾತ್ಲೆ...

ಮೇಯರ್ : ಲುಕ್ ಹಿಯರ್ ಯಾರೇ ಬರ್ಲಿ ನನ್ನ ಪರ್ಮಿಷನ್ ಇಲ್ಲದೆ ಯಾರೂ ಸಾಹೇಬ್ರ ಮೀಟ್ ಆಕೆ ಬುಡಿಕೆ ಬೊತ್ತು... ನಿನ್ನ ಡಿಎಸ್‌ಪಿ ಬಂದರೂ... ನನ್ನೊಟ್ಟಿಗೆ ಕೇಳಿಯೇ ಹೋಕು.... ಇಲ್ಲೇ ನಿತ್‌ಕ... ನಿದ್ದೆ ಮಾಡ್‌ಬಡ.. ಗೊತ್ತಾತ (ಆಜ್ಞಾಪಿಸಿ ಹೋಗುವನು)

**ಕತ್ತಲೆ**

# ಅಂಕ 4

(ಮೇಯರ್ ಮನೆ. ಹಾಲ್‌ನಲ್ಲಿ ಮ್ಯಾಜಿಸ್ಟ್ರೇಟ್, ಇಂಜಿನಿಯರ್, ಎಜ್ಯುಕೇಶನ್ ಆಫೀಸರ್, ಪೋಸ್ಟ್‌ಮಾಸ್ಟರ್, ಡಾಕ್ಟರ್, ದೋಚಯ್ಯ ಬಾಚಯ್ಯ ಕಾದು ನಿಂತಿದ್ದಾರೆ. ಕೈಯಲ್ಲಿ ಹಾರ ನಿಂಬೆಹಣ್ಣು)

ಮ್ಯಾಜಿಸ್ಟ್ರೇಟ್ : (ಎಲ್ಲರನ್ನು ಸರಿ ನಿಲ್ಲಿಸುತ್ತಾ) ಹ್ಣಂ.... ರೂಮುನ ಒಳಗೇ ಒಳೋ. ಅದೇ ರೂಮೂ.. ಒಬ್ಬ ಆದ ಮೇಲೆ ಮತ್ತೊಬ್ಬ ಹೋಕು. ನೊ... ನೊ.... ನೋ.... ಹಾಂಗೆ ಹುಗ್ಗಿಕೆ ಇದೆಂತ ಸಂತೆನ.. ಆರ್ಡರ್... ಆರ್ಡರ್.. ಎಲ್ಲಾ ಕ್ಯೂಲಿ ನಿಲ್ಲಿ (ನಿಲ್ಲಿಸುತ್ತಾ) ದೋಚಯ್ಯ, ನೀವು ಹಿಂದೆ ಹೋಗಿ. ಬಾಚಯ್ಯ ನೀವು ಕೂಡ.. ಹ್ಣಾಂ.. ಸಾವಿತ್ರಮ್ಮ ಮುಂದೆ ಬನ್ನಿ. ಇಂಜಿನಿಯರ್ ಇಲ್ಲಿ ನಿಲ್ಲಿ.

ಮ್ಯಾಜಿಸ್ಟ್ರೇಟ್ : ಸಾವಿತ್ರಮ್ಮ ಸುರುಗೆ ನೀವು ಹೋಗಿ...

ಎಜ್ಯುಕೇಶನ್ : ಎಂತೆಂತೇಳ್ರೆ ನಾ... ಬೇಡ. ನೀವು ಸೀನಿಯರ್. ನೀವೇ ಸುರುಗೆ ಹೋಗಿ...

ಮ್ಯಾಜಿಸ್ಟ್ರೇಟ್ : ಇದರ್ಲೆಲ್ಲಾ ಸಿನಿಯಾರಿಟಿ ಎಂತ... ಇಲ್ಲೆಂತ ಪ್ರಮೋಶನ್ ಸಿಕ್ಕಿದೆನಾ.... ದಿಸ್ ಇಸ್ ಪ್ಯೂರ್‌ಲಿ ಅನ್ ಅಫೀಷಿಯಲ್. ಶುದ್ಧ ಕನ್ನಡಲಿ ನಾಲ್ಕು ಮಾತಾಡೊಕುಂತಾದರೆ ಅದ್ ನೀವೇ ಆಕು. ಭಾಷೆ... ಭಾಷೆ

ಮುಖ್ಯ. ಹೋಗಿ.. ಹೋಗಿ....

ಎಜ್ಯುಕೇಶನ್ : ಎಂತೇಂತೇಳ್ರೇ.... ನೀವ್ಗೆಲ್ಲ ಗೊತ್ತುಟು... ನಂಗೆ ಸ್ವಲ್ಪ ಬಿ.ಪಿ ಉಟ್ಟು. ದೊಡ್ಡ ಆಫೀಸರ್ ಎದುರು ಹೇಂಗೆ ಒಬ್ಬನೇ ಹೋಗಿ ನಿಲ್ಲುದು.

ಮಾಜಿಸ್ಟೇಟ್ : ಹಂಗಾರೆ... ಹ್ಣಂ... ಇಂಜಿನಿಯರ್ ನೀವೆ ಹೋಗಿ..

ಇಂಜಿನಿಯರ್ : ಹ್ಞೆ.....ಹ್ಞೆ...... ನಾ ಏನಿದ್ದರೂ...... (ಹೀಗೆ ವಾದಿಸುತ್ತಾ ಒಬ್ಬರನ್ನೊಬ್ಬರು ತಳ್ಳುತ್ತಿರುವಾಗ ತಿವಾರಿ ಬರುತ್ತಾನೆ. ಇಡೀ ಕ್ಯೂ ಹಿಂದೆ ಸರಿಯುತ್ತದೆ. ಕಾಲು ತುಳಿತ. ಮುಖದಲ್ಲಿ ಅಸಹನೆ ಮತ್ತು ಎಲ್ಲರನ್ನು ಸರಿ ನಿಲ್ಲಿಸಲು ಮ್ಯಾಜಿಸ್ಟೇಟ್ ಹೆಣಗಾಟ.... ಆಗ ಸಕ್ಸೇನಾ ಪ್ರವೇಶ. ಎಲ್ಲರೂ ಒಂದೊಂದು ಕಡೆಗೆ ಸರಿದು ಅಡಗಿಕೊಳ್ಳುತ್ತಾರೆ. ನಿಧಾನಕ್ಕೆ ಬಂದ ಸಕ್ಸೇನಾ ಕುರ್ಚಿಯಲ್ಲಿ ಕುಳಿತು ಸುತ್ತಲೂ ನೋಡುತ್ತಾನೆ. ಯಾರು ಕಾಣಿಸದಿದ್ದಾಗ ತಿವಾರಿ ಒಳಕ್ಕೆ ಹೋಗುತ್ತಾನೆ. ಒಂದು ಮೇಜಿನ ಕೆಳಗಿನಿಂದ ಮ್ಯಾಜಿಸ್ಟೇಟ್ ನಿಧಾನಕ್ಕೆ ಎದ್ದು ಬರುತ್ತಾನೆ. ಸಕ್ಸೇನಾ ಆತನ ಕಡೆ ನೋಡುವಾಗ ಮತ್ತೆ ಅಡಗಲು ಯತ್ನ. ಆಗ ಸಕ್ಸೇನಾ ಕಣ್ಣಿಗೆ ಬೀಳುತ್ತಾನೆ)

ಮ್ಯಾಜಿಸ್ಟ್ರೇಟ್ : ಹ್ಞೆ... ಹ್ಞೆ... ಸಾರ್... ಗುಡ್ ಮಾರ್ನಿಂಗ್ ಸಾರ್..

ಸಕ್ಸೇನಾ : ಅಯ್ಯೋ... ನೀವಾ ಮಾರಾಯ್ರೆ... ನಾ ಹೆದ್ರಿಬುಟ್ಟೆ. ಅಲ್ಲ ನೀವು ಅಲ್ಲಿ ಯಾಕೆ

ಕುದ್ದದ್.

ಮ್ಯಾಜಿಸ್ಟ್ರೇಟ್ : ಹ್ಹೆ..ಹ್ಹೆ... ಸಾರ್ ಗೌರವ... ನೀವು ಬಾಕನ ಬಗ್ಗಿ ನಿತ್ತ್ ಗೌರವ ಸಲ್ಲಿಸಿದ್. ಬಗ್‌ಕನ ತಲೆಗೆ ಹಂಞ ತಾಂಗಿತ್. ಹಾಂಗೆ ಬಿದ್ದ್ ಬುಟ್ಟೆ.

ಸಕ್ಸೇನಾ : ವಾಟ್... ಪೆಟ್ಟಾತ ಹೇಂಗೇ?

ಮ್ಯಾಜಿಸ್ಟ್ರೇಟ್ : ಚೇ...ಚೇ.... ಇಲ್ಲೇ ತಾಂಗಿತ್‌ಲೆ

ಸಕ್ಸೇನಾ : ಅದೇ ನಮ್ಮ ಸೆಕ್ರಟರಿನೊಟ್ಟಿಗೆ ಕೇಳ್ತಿದ್ದೆ. ಯಾರೂ ಬಾತ್ಲೆನಾ ಅಂತ... ಯಸ್... ಯುವರ್ ನೇಮ್ ಪ್ಲೀಸ್.

ಮ್ಯಾಜಿಸ್ಟ್ರೇಟ್ : ಸರ್.. ಎ.ಟಿ ಪೂಣಚ್ಚಂತ. ಅಳಿಕೆಮಜಲು ತ್ಯಾಂಪಣ್ಣ ಪುಣಚ್ಚಾಂತ. ಮ್ಯಾಜಿಸ್ಟ್ರೇಟ್. ಮೈ ಅಪಾಂಟ್‌ಮೆಂಟ್ ಆರ್ಡರ್ ನಂ. ಸಿಡಿ 1989 ಬಾರ್ 12 ಇಡಿಪಿ ಬಾರ್. 1989 ಡೇಟೆಡ್ ಟ್ವೆಂಟಿಯತ್ ಸೆಪ್ಟೆಂಬರ್ 1989. ದಿ. ಗವರ್ನರ್ ಈಸ್ ಪ್ಲೀಸ್ಡ್ ಟು....

ಸಕ್ಸೇನಾ : ಓ.ಕೆ... ಓ.ಕೆ ಅದರೆಲ್ಲ ಕೇಳ್ದೆನಾ...? ಬನ್ನಿ ಇಲ್ಲಿ... ಈ ಮ್ಯಾಜಿಸ್ಟ್ರೇಟ್ ಕೆಲ್ಸಂತೇಳ್ರೆ ಬಾರಿ ಜಬರ್ದಸ್ತ್‌ನ ಕೆಲ್ಸ ಅಲ್ಲ...

ಮ್ಯಾಜಿಸ್ಟ್ರೇಟ್ : ಹ್ಹೆ....ಹ್ಹೆ.... ಏನೋ ಸಾರ್.. 29 ವರ್ಷಂದ ಈ ಘನ ಸರ್ಕಾರದ ಕೆಲ್ಸಲಿ ಒಳೆ. ಘನ ಸರ್ಕಾರದ ಪರವಾಗಿ ಜನಕ್ಕೆ ನ್ಯಾಯದಾನ, ಪವಿತ್ರ ಕಾನ್ಸಿಟಿಟ್ಯೂಷನ್, ಆರ್ಟಿಕಲ್ 26ಲಿ ಹೇಳ್ದಾ ಹಾಂಗೆ.

ಸಕ್ಸೇನಾ : ಕಾನ್‌ಸ್ಟಿಟ್ಯೂಷನ್...? ಬಾರಿ ದಪ್ಪ ಉಟ್ಟ

ಪುಸ್ತಕ...? ಇಡೀ ಓದ್ಯಳರಿಯಾ....?

ಮ್ಯಾಜಿಸ್ಟ್ರೇಟ್ : ಹೌದಪ್ಪ. ಇಡೀ ಪುಸ್ತಕ ಬಾಯಿಪಾಠ ಮಾಡಿದ್ದೆ. ಬಾಯಿಪಾಠಂತೇಳ್ರೆ ಈಗ ಎಡೆಎಡೆಲಿ ಕೆಲವು ಮರ್ತ್ ಹೋಗುಟು. ಈ ಸಣ್ಣ ಊರ್‌ಗೆ ಎಷ್ಟ್ ಬೇಕೋ ಅಷ್ಟ್ ನೆಂಪುಟ್ಟು. ಅದೇ ದೊಡ್ಡವು ಹೇಳ್ವೆ ಅಲ್ಲ. ಅಷ್ಟಿಲ್ಲದಿದ್ದರೆ ಇಷ್ಟ್‌ಂತ. ಸಾವಿರ ಇಲ್ಲದಿದ್ದರೆ ಐನೂರು (ಜೇಬಿನಿಂದ ನೋಟುಗಳನ್ನು ಬೇಕಂತಲೇ ಬೀಳಿಸುತ್ತಾನೆ)

ಸಕ್ಸೇನಾ : ಅದೆಂತ ಕಿಸೆಂದ ಬಿದ್ದದ್.

ಮ್ಯಾಜಿಸ್ಟ್ರೇಟ್ : ಎಂತ ಇಲ್ಲೆ... ಕಾಗದ... ಕಾಗದ.. ಅದೇ ಸಾವಿರ ಅಲ್ಲದಿದ್ದರೆ ಇದ್ದಷ್ಟು.

ಸಕ್ಸೇನಾ : (ಬಗ್ಗಿ ಹೆಕ್ಕಿಕೊಂಡು) ಅದ್ ಹೌದು... (ಸ್ವಲ್ಪ ಆಲೋಚಿಸಿ) ನಂಗೂ ಸ್ವಲ್ಪ ದುಡ್ಡ್‌ನ ಸಮಸ್ಯೆ ಇತ್ತ್.

ಮ್ಯಾಜಿಸ್ಟ್ರೇಟ್ : ಸಾರ್.... ಅಯ್ಯೋ.. ನಿಮ್ಮ ಸಮಸ್ಯೆ ಬೇರೆ ಅಲ್ಲ.... ನಮ್ಮದ್ ಬೇರೆ ಅಲ್ಲ. ಅದರೆಲ್ಲ ತಕಣಿ... (ಕೊಡುವನು)

ಸಕ್ಸೇನಾ : (ತೆಗೆದುಕೊಳ್ಳುತ್ತಾ) ಊರ್‌ಗೆ ಹೋದ ಮೇಲೆ ನೆಫ್ಟ್ ಮಾಡ್ನೆ ಆತಾ. ಹೆದ್ರ್ ಬಡಿ.

ಮ್ಯಾಜಿಸ್ಟ್ರೇಟ್ : ಅಯ್ಯಯ್ಯೋ..... ಬೇಡಪ್ಪ. ಕಳ್ಸುದೆಲ್ಲ ಬೇಡ. ನಿಮ್ಮ ಸಂತೋಷನೇ ನಮ್ಮ ಸಂತೋಷ. (ಈಚೆ ತಿರುಗಿ) ಅಲ್ಲ ಆಫೀಸಿಗೆ ಬಂದವ್ರೂ.... ಏನೋ ಖುಷಿಗೆ ಅಂತ ಅಷ್ಟೋ ಇಷ್ಟೋ ಮೇಜಿನ ಮೇಲೆ

ಇಸಿ ಹೋದವೆ. ಬೇಡಾಂತ ಹೇಳ್ರೆ ಅವ್ಕೆ ಬೇಜಾರಾದೆ. ಜನ ಅದರ್ನೆ ಲಂಚ, ಅದ್ ಇದ್‌ಂತೇಳಿ ರೂಮರ್ ಮಾಡುವೆ. ಅದೆಲ್ಲ ಅವರವರ ಸಂತೋಷಕ್ಕೆ ಅಷ್ಟೇ. ಇದ್ ಲಂಚನಾ...

ಸಕ್ಸೇನಾ : ಅಲ್ಲ

ಮ್ಯಾಜಿಸ್ಟ್ರೇಟ್ : ಇದ್ ಪ್ರೀತಿ..., ವಿಶ್ವಾಸ (ಎನ್ನುತ್ತಾ ಇನ್ನಷ್ಟು ಹಣದ ಕಟ್ಟು ಇಡುತ್ತಾನೆ)

ಸಕ್ಸೇನಾ : ಹೌದಪ್ಪ... ಇದ್ ಪ್ರೀತಿ.. ವಿಶ್ವಾಸ (ಹಣವನ್ನು ಬಾಚಿಕೊಳ್ಳುತ್ತಾನೆ.)

ಮ್ಯಾಜಿಸ್ಟ್ರೇಟ್ : ನೀವುಗೆ ಕುಸಿಯಾದರೆ ಅದೇ ದೇವ್ರ್‌ಗೆ ಕುಸಿಯಾದಂಗೆ... ಥ್ಯಾಂಕ್ಯೂ ಸರ್. ನಾ.. ಬನ್ನೆ ಸಾರ್ (ಬಗ್ಗಿ ಬಗ್ಗಿ ನಮಸ್ಕರಿಸುತ್ತಾ ಹೋಗುತ್ತಾನೆ)

ಪೋಸ್ಟ್‌ಮಾಸ್ಟರ್: (ಪ್ರವೇಶಿಸಿ) ಸರ.... ನಾ ಪೋಸ್ಟ್‌ಮಾಸ್ಟರ್. ಅದೇನ್ರಿ ಸರ.... ಟಿ.ಆರ್ ಮುಂಡುಗೋಡ್.. ತಿರುಕಪ್ಪ ರಗಳಪ್ಪ ಮುಂಡಗೋಡ್. ಇಲ್ಲಿಗೆ ಬಂದ್ ಆರು ವರ್ಷ ಆತ್ರಿ...ಸರ.

ಸಕ್ಸೇನಾ : ಗುಡ್... ನಿಮ್ಮ ಹಕ್ಕಲೆ ಬೀಡಿ ಉಟ್ಟಾ?

ಪೋಸ್ಟ್‌ಮಾಸ್ಟರ್: ಇಲ್ರಿ ಸರ.... ಹೂಂನ್ರಿ ಸರ... ಇಲ್ರಿ ಸರ.. ಆಫೀಸ್ ವ್ಯಾಳ್ಯಾಗ ನಾ ಬೀಡಿ ಸೇದಂಗಿಲ್ರಿ.... ಮನೆಯೊಳಗ ಮಾತ್ರ ಸೇದತೀನ್ರಿ ಸರ.... ಅದೂ ಅಪರೂಪಕ್ಕ (ಕಿಸೆಯಿಂದ ತೆಗೆದು) ಬೀಡಿ ಐತ್ರಿ... ಆದ್ರ... ನಿಮಗಿದ ಬ್ಯಾಡ್ರಿ.. ನಾ ಸಿಗರೇಟ ತತ್ತೀನ್ರಿ (ಹೊರಡುತ್ತಾನೆ)

ಸಕ್ಸೇನಾ : ಸಿಗರೇಟ್ ಬೇಡ. ಅದ್ ಗಂಟ್ಲ್ ಕೆರ್ದದೆ. ಬೀಡಿ ಒಳ್ಳೆದ್ ಕೊಡಿ.

ಪೋಸ್ಟ್‌ಮಾಸ್ಟರ್: ಹೂನ್ರಿ ಸರ.. ತಗಳ್ರಿ ಸರ.... ಮೂವತ್ತನೇ ನಂಬರ್ ಬೀಡಿ ಸರ...

ಸಕ್ಸೇನಾ : ಇಲ್ಲಿ ಇದ್ ಬಾರೀ ಫೇಮಸ್ ಅಲ್ಲ... ಅದರ್ನೆ ಕೊಡಿ.... (ತಗೊಂಡು ಹಚ್ಚುವಂತೆ ಮಾಡಿ) ನೀವು ಒಂದು ಎಳೆನಿ.

ಪೋಸ್ಟ್‌ಮಾಸ್ಟರ್: ಬ್ಯಾಡ್ರಿ ಸರ.. ನಿಮ್ಮೆದುರು ಸೇದಂಗಿಲ್ರಿ... ತಾವು ಆಫೀಸರ್ ಅಲ್ರಿ.. ನಾ.. ಸೇದಂಗಿಲ್ರಿ....

ಸಕ್ಸೇನಾ : ಹೇಳ್ದಾಂಗೆ... ನಿಮ್ಮ ಹಕ್ಕಲೆ ಏನಾರ್ ಒಸಿ ದುಡ್ಡ್ ಉಟ್ಟಾ. ಇದ್ದರೆ ಹಂಞ ಬೇಕಿತ್ತ್... ಊರಿಗೆ ಹೋಗಿ ಎಂ.ಓ ಮಾಡ್ನೆ.

ಪೋಸ್ಟ್‌ಮಾಸ್ಟರ್: ಅಯ್ಯಯ್ಯೋ... ಬ್ಯಾಡ್ರಿ ಸರ.. ಕಳಿಸೋದೆಲ್ಲ ಬ್ಯಾಡ್ರಿ.. ತಗೊಳ್ರಿ ಸರ (ಕೊಡುತ್ತಾನೆ) (ಸಕ್ಸೇನಾ ಎಣಿಸುವಾಗ) ಎಣಿಸೋದ್ಯಾಕ್ರೀ ಸರ... ಎಣಿಸೋದೆಲ್ಲ ಬೇಡ.

ಸಕ್ಸೇನಾ : ಓ.ಕೆ. ಥ್ಯಾಂಕ್ಯೂ....

ಪೋಸ್ಟ್‌ಮಾಸ್ಟರ್: ಥ್ಯಾಂಕ್ಯೂ ಸರ... ತಮ್ಮಿಚ್ಚೆ ಸರ.. ಬರ್ತೀನಿ ಸರ.. (ಹಿಂದೆ ಹಿಂದೆ ಸರಿಯುತ್ತಾ, ಏನೋ ನೆನಪಾದಂತೆ ಆಗಿ) ಸರ.. ನನ್ನೊಂದೊಂದ್ ಮನವಿ ಇತ್ತ್. ಈ ಊರು ಸರಿ ಇಲ್ರೀ.. ಆ ಮೇಯರ್ ಸರಿ ಇಲ್ರೀ.. ನನ್ ಹೆಂಡ್ತಿ ಮಕ್ಕಳು ನೆನಪಾಗಕತ್ತಾರ. ಒಂದ್ ಟ್ರಾನ್ಸ್ಫರ್ ಕೊಡ್‌ಸ್ರೋ ಸರ್. ಈ ಊರು ಸಾಕಾಗೈತೆರೀ..

ಸಕ್ಸೇನಾ : ಸರಿ... ಸರಿ. ನನ್ನ ಪಿ.ಎ ಹಕ್ಕಲೆ ಕೊಡಿ. ಟ್ರಾನ್ಸಫರ್ ಆದೆ.
(ಪೋಸ್ಟ್‌ಮಾಸ್ಟರ್ ಹೊರಹೋಗುತ್ತಾ ತಿವಾರಿ ಕೈಗೆ ವಿನಮ್ರವಾಗಿ ಕಾಗದ ಕೊಟ್ಟ್ ಹೋದೆ, ತಿವಾರಿ ಅದರ 'ಫೈಲ್ ಮಾಡಿಕಣೆ' ಹೇಳಿ ಕುಂಡೆ ಅಡಿಗೆ ಇಸಿದೆ)

ಎಲ್ಲರೂ : ಏನ್ ಕೇಳ್ಬೊ..

ಪೋ.ಮಾ : ಬಾಳ ಒಳ್ಳೆವ್ರುರೀ.. ಹೋಗ್ರಿ.. ಹೋಗ್ರಿ..
(ಎಲ್ಲರೂ ಸೇರಿ ಎಜ್ಯುಕೇಶನ್ ಆಫೀಸರ್ ಸಾವಿತ್ರಮ್ಮನನ್ನು ತಳ್ಳುತ್ತಾರೆ. ಮುಗ್ಗರಿಸಿ ಕೈಯ್ಯಲ್ಲಿದ್ದ ನಿಂಬೆಹಣ್ಣು ಉರುಳುತ್ತದೆ. ಉರುಳಿ ಬಂದ ನಿಂಬೆಹಣ್ಣನ್ನು ಸಕ್ಸೇನಾ ಹೆಕ್ಕುತ್ತಾನೆ)

ಸಕ್ಸೇನಾ : ಲಿಂಬೂ.....!

ಎಜ್ಯುಕೇಶನ್ : ಹೌದು... ಸ್ವಾಮಿ. ನಿಂಬುಳಿ... ಎಂತಂತೇಳ್ರೇ... ಖಾವಂದರ ಸನ್ನಿಧಿಗೆ ಗೌರವಾರ್ಥ...

ಸಕ್ಸೇನಾ : ಲಿಂಬೂ.... ಬಹುತ್ ಅಚ್ಛಾ ಹೇ...ಹಂದಿ ಗೈಪುಗೆ ಹಿಂಡಿರೆ ಬಾಳ ಲಾಯ್ಕ ಅಲ..

ಎಜ್ಯುಕೇಶನ್ : ಸಾರ್... ನಾವು ಅದೆಲ್ಲ ಇಲ್ಲೆ. ಶುದ್ಧ ಶಾಖಾಹಾರಿ.

ಸಕ್ಸೇನಾ : ಚೇ... ಚೇ.... ನೀವು ತಿನ್ನದಿದ್ದರೆ ಬೇಡ....

ಎಜ್ಯುಕೇಶನ್ : ಅಯ್ಯೊ.... ನೀವ್ಗೆ ಅಲ್ಲ ಹೇಳ್ದ್.. ಅದ್ ನಾವ್ಗೆ ಮಾತ್ರ. ನಾವು ಬೇರೊವ್ಕೆ 'ಯದ್ಯದಾಚರತಿ ಶ್ರೇಷ್ಠ, ತತ್ವದೇವತರೋಜನಾಃ' ಹಾಂಗೆ.

ಸಕ್ಸೇನಾ : ಸಂಸ್ಕೃತ... ನೀವು ಸಂಸ್ಕೃತ ಪಂಡಿತರಾ..

ಎಜ್ಯುಕೇಶನ್ : ಸ್ವಾಮಿ.. ಅಲ್ಲಲ್ಲ..... ನಾ... ಸಂಸ್ಕೃತ ಪಂಡಿತ ಅಲ್ಲ. ಮತ್ತೆ ಏನೋ ಆಚಾತುರ್ಯ. ಸಂಸ್ಕೃತ ಪಂಡಿತರ್ ತುಂಬಾ ಒಳ್ಳೆವೇ. ಆದರೂ ಪಾಪ ಗೊತ್ತಿಲ್ಲದೇ ಆಗಿ ಹೋತ್. ಅದರ ಕೂಡ್ಲೆ. ಮೇಜಿನ ಕಾಲ್ ರಿಪೇರಿ ಮಾಡ್ಸಿಯಳೆ. ಈಗ ಎಲ್ಲ ಸರಿ ಉಟ್ಟು.

ಸಕ್ಸೇನಾ : ಮೇಜಿನ ಕಾಲ್..?

ಎಜ್ಯುಕೇಶನ್ : ನಾ ಅಲ್ಲ... ಗುದ್ದಿ ಮುರ್ದದ್ ಸಂಸ್ಕೃತ ಪಂಡಿತರ್.

ಸಕ್ಸೇನಾ : ಮತ್ತೇ ನೀವು...

ಎಜ್ಯುಕೇಶನ್ : ನಾ... ಎಜ್ಯುಕೇಶನ್ ಅಫೀಸರ್... ಕನ್ನಡ ಸಂಸ್ಕೃತಿ ಇಲಾಖೆ ಅಸಿಸ್ಟೆಂಟ್ ಡೈರೆಕ್ಟರ್ ಪ್ರಭಾರ... ಬರೇ ಪ್ರಭಾರ ಅಷ್ಟೇ.

ಸಕ್ಸೇನಾ : ಓ... ಕಲೆ... ಸಂಸ್ಕೃತಿ..

ಎಜ್ಯುಕೇಶನ್ : ಹ್ಞ... ಹೌದೌದು. ಕಲ್ಚರ್ ಡೆವಲಪ್‌ಮೆಂಟ್....

ಸಕ್ಸೇನಾ : ನೀವು ನಾಟಕದಲ್ಲಿ ಪಾರ್ಟ್ ಮಾಡ್ಯರಿಯಾ...

ಎಜ್ಯುಕೇಶನ್ : ಹೌದು.. ಇಲ್ಲೆ... ಸ್ವಲ್ಪ ಸ್ವಲ್ಪ ಕಾಳಿದಾಸ.... ಸದಾರಮೆ ಹೀಂಗೆ ಅಲ್ಲಿ ಇಲ್ಲಿ....

ಸಕ್ಸೇನಾ : ಗೊತ್ತಾತ್ ಬುಡಿ.

ಎಜ್ಯುಕೇಶನ್ : ಅಯ್ಯೊಯ್ಯೊ... ಹಾಂಗೇಂತ ಆಫೀಸ್ ಟೈಮ್‌ಲಿ ಹೋತ್ಲೆ. ಹಿಂಬೊತ್ತ್ ಆಫೀಸ್ ಬುಟ್ಟ ಮೇಲೆ. ರಾತ್ರೆ ಪ್ರಾಕ್ಟೀಸ್.. ಹಿಂಗೆ... ಯಾಗೊಳು ಇಲ್ಲೆ. ಬೇರೆ ಯಾವುದೇ ಹವ್ಯಾಸ ಇಲ್ಲೆ.

ಸಕ್ಸೇನಾ : ಹ್ಞಂ.. ನಿಮ್ಮಕ್ಕಲೆ ಇದ್ದರೆ ಒಂಚೂರು ಸಾಲ ಕೊಟ್ಯರಿಯಾ (ಕೊಡುವರಿಯಾ)

ಎಜ್ಯುಕೇಶನ್ : ಹ್ಞಂ.. ತಂದಿದ್ದೆ ಸಾರ್. ಖಂಡಿತಾ.. (ತಡವರಿಸಿ... ವ್ಯಾನಿಟಿಬ್ಯಾಗ್ಲಿ ಇದ್ದ ನೋಟ್‌ನ ಕಂತೆನ ಕೊಟ್ಟದೆ)

ಸಕ್ಸೇನಾ : ಇನ್ನು ಉಟ್ಟ?
(ವ್ಯಾನಿಟಿಬ್ಯಾಗ್ನ ಕೊಡ್ಕಿದೆ ಚಿಲ್ಲರೆ ಎಲ್ಲ ಹಾಸಿಗೆ ಮೇಲೆ ಬಿದ್ದದೆ. ಸಕ್ಸೆನಾ ಎಲ್ಲ ಬಾಚಿ ಬಾಚಿ ತಕಂಡದೆ)

ಸಕ್ಸೇನಾ : ಥ್ಯಾಂಕ್ಯೂ.. ನೀವಿನ್ನು ಹೋಕ್
(ಎಜ್ಯುಕೇಶನ್ ನಿರ್ಗಮನ. ಇಂಜಿನಿಯರ್ ಪ್ರವೇಶ)

ಇಂಜಿನಿಯರ್ : ಗುಡ್ ಮಾರ್ನಿಂಗ್ ಸಾರ್..

ಸಕ್ಸೇನಾ : ಹ್ಞ... ಹ್ಞ..... ಹೇಳಿ

ಇಂಜಿನಿಯರ್ : ಸಾರ್... ಈಗ ಬಂದಿದ್ದೊ... ಅಲ್ಲ.... ನಾ ಹೇಳದಿದ್ದರೆ ತಪ್ಪಾದೆ. ಅವು...

ಸಕ್ಸೇನಾ : ಹ್ಞಂ.... ಅವು....

ಇಂಜಿನಿಯರ್ : ಅವು ಸುಬಗರ್‌ಂತ ನೀವು ನಂಬ್‌ಬಡಿ ಸಾರ್. ಎಲ್ಲವೂ ಬಾರಿ ಕದೀಮರ್. ಆ ಮ್ಯಾಜಿಸ್ಟ್ರೇಟ್ ಪೋಸ್ಟ್‌ಮಾಸ್ಟರ್, ಎಜ್ಯುಕೇಶನ್ ಆಫೀಸರ್ ಎಲ್ಲ ಬಾರಿ ಡೋಂಗಿಗ. ಅನಾಚಾರ ಭ್ರಷ್ಟಾಚಾರ ಹೇಳುವಂಗಿಲ್ಲೆ ಹೇಳದಿರುವಂಗೂ ಇಲ್ಲೆ. ಕ್ಯಾರೆಕ್ಟರ್ ಲೆಸ್... ಅವರ ಬುಡಿ. ನಮ್ಮ ಮೇಯರ್ ಕೂಡಾ...

ಸಕ್ಸೇನಾ : ಓಹೋ.... ಹೌದಾ... ಹೇಳ್ದಂಗೆ ನೀವು ಯಾರು?

ಇಂಜಿನಿಯರ್ : ಹ್ಹೆ...ಹ್ಹೆ.... ಇಂಜಿನಿಯರ್... ಪಿಡಬ್ಲ್ಯೂಡಿ ಇಂಜಿನಿಯರ್ ಬೆಳ್ಯಪ್ಪ. ಇಲ್ಲಿಗೆ ಎಪಾಂಯಿಂಟ್‌ಮೆಂಟ್ ಆಗಿ 10 ವರ್ಷ ಆತ್.

ಸಕ್ಸೇನಾ : ಓಹೋ ಪಿಡಬ್ಲ್ಯೂಡಿ ಒಳ್ಳೆ ಡಿಪಾರ್ಟ್‌ಮೆಂಟ್ ಅಲ್ಲ.

ಇಂಜಿನಿಯರ್ : ಹ್ಹೆ..ಹ್ಹೆ.... ಹಾಂಗೇನೂ ಇಲ್ಲೆ ಸಾರ್....

ಇಂಜಿನಿಯರ್ : ಸರ್ ಈ ಮೇಯರ್ ಭಯಂಕರ ಸಾರ್. ಆಸ್ಪತ್ರೆ ಕಟ್ಟಡಕ್ಕೆ ಸೆಂಟ್ರಲ್‌ಂದ ಮೂರು ಕೋಟಿ ಬಂದಿತ್ತ್. ದುಡ್ಡ್ ರಿಲೀಸ್ ಆಗುಟು. ಕಟ್ಟಡ ಅರ್ಧಲೇ ಉಟ್ಟು. ಮೇಯರ್‌ನ ಹೊಸ ಮನೆ ಮಾತ್ರ ಕಂಪ್ಲೀಟ್ ಆವುಟು ಸರ್.. ನಾ ಕಂಟ್ರಾಕ್ಟರ್‌ಗ ಸ್ಟ್ರಿಕ್ಟ್ ಆಗಿ ಹೇಳ್ಯಳೆ. ಬಿಲ್ಡಿಂಗ್ ಆಗದಿದ್ದರೆ ನೀನೇ ಜನ ಅಂತ. ಮಾಡ್ನೆ ಮಾಡ್ನೆಂತೇಳಿ ವರ್ಷ ಆತ್. ಮತ್ತೆ ಶೌಚಾಲಯ. ಮೂರು ಶೌಚಾಲಯದ ದುಡ್ಡು ರಿಲೀಸ್ ಆಗಿ ಎರ್ಡ್ ವರ್ಷ ಆತ್. ಒಂದೂ ಕಟ್ಟಿತ್ಲೆ. ಈ ಮೇಯರ್ ಭಯಂಕರ. ಸೆಂಟ್ರಲ್‌ಗೆ ಕಂಪ್ಲೈಟ್ ಮಾಡೊಂಕೂಂತ ಇದ್ದೆ. ಅಷ್ಟಾಕನ ನೀವೇ ಬಂದರಿ.

ಸಕ್ಸೇನಾ : ಬರ್‍ಯೆನಿ... ಸೆಂಟ್ರಲ್‌ಗೆ ಬರ್‍ಯನಿ. ಅದೂ ನನ್ನ ಟೇಬಲ್‌ಗೆ ಬಾದು.

ಇಂಜಿನಿಯರ್ : ಸರ್... ಮತ್ತೆ ಮೊನ್ನೆ ಒಂದು ರೇಪ್ ಕೇಸ್ ಆತ್. ಪಾಪ ಕೂಲಿ ಹೆಂಗ್ಸ್. ಈ ಮೇಯರ್ ದುಡ್ಡ್ ಕೊಡ್ಸಿ ಕೇಸ್ ಮುಚ್ಚಿ ಹಾಕಿದೊ. ಅಂತದ್ ವರ್ಷಕ್ಕೆ ನಾಲ್ಕು ಆದೆ. ಒಂದೂ ಕೇಸ್ ನಿಲ್ಲುದುಲೇ...

ಸಕ್ಸೇನಾ : ವಿಷಯ ಹಿಂಗೆಲ್ಲಾ ಉಟ್ಟಾ. ಅದೇ ನಿಮ್ಮ ಊರು, ಸತ್ಕಾರ ಎಲ್ಲ ಲಾಯಿಕ್ ಇತ್ತ್. ಬೇರೆಂತದೂ ಇಲ್ಲೆನೋ ಅಂತ ನೋಡ್ತಾ ಇದ್ದೆ. ಬಾರಿ ಒಳ್ಳೆ ವಿಷಯ ಹೇಳ್ದರಿ. ಹೇಳ್ದಾಂಗೆ ನೀವು...

ಇಂಜಿನಿಯರ್ : ಅದೇ ಇಂಜಿನಿಯರ್ ಬೆಳ್ಯಪ್ಪ....

ಸಕ್ಸೇನಾ : ಹ್ಞಂ.. ಪಿಡ್ಲ್ಯೂಡಿ... ಯಸ್.. ಬೆಳ್ಯಪ್ಪ ನಿಮ್ಮ ಹಕ್ಕಲೆ ಏನಾರ್ ದುಡ್ಡು ಇರ್‍ದೊ.....

ಇಂಜಿನಿಯರ್ : ಹ್ಞಂ... ಸರ್... ಮರ್‍ತೇ ಬುಟ್ಟೆ. ಗಡಿಬಿಡಿಲಿ ಬಾಕಿ ಆತಿತ್ತ್. (ಒಂದೊಂದೇ ಕಿಸೆಂದ ಅತ್ತಿತ್ತ ನೋಡಿಕಂಡ್ ನೋಟ್‌ನ ಕಂತೆ ತೆಗ್ದದೆ, ಕಡೆಗೆ ಬೆಲ್ಟ್ ಸಡಿಲ ಮಾಡಿ ಹೊಟ್ಟೆಲಿ ಇಸಿದ್ದ ನೋಟ್ನ ಕಂತನೆಲ್ಲ ಬೀಳ್ಸಿದೆ) ಸರ್.. ಕಡಿಮೆ ಆತ್‌ಂತ ಬೇಜಾರ್ ಮಾಡ್ಬಡಿ. ಕಡಿಮೆ ಆದರೆ ಹೇಳಿ. ಹಿಂಬೊತ್ತ್ ಬನ್ನೆ. ಸಾರ್ ಪಿಡಬ್ಲ್ಯೂಡಿಲಿ ಈಗ ಮುಂದೇ ನಂಗೆ ಸಿಕ್ಕುದುಲೆ. ಬಾರಿ ಕಮ್ಮಿ.

ಸಕ್ಸೇನಾ : ಓಕೆ.... ಓಕೆ.... ಊರಿಗೆ ಹೋದ ಕೂಡ್ಲೆ ಕಳ್ಸಿನೆ..

ಇಂಜಿನಿಯರ್ : ಅಯ್ಯಯ್ಯೋ... ನೀವು ತಪ್ಪು ತಿಳ್ಕಂಬಡಿ...

ಸಕ್ಸೇನಾ : ಅಲ್ಲ.. ಖಂಡಿತಾ ಕಳ್ಸೀನೆ..

ಇಂಜಿನಿಯರ್ : ಕಳ್ಸಿ ಸಾರ್... ಅವರೆಲ್ಲ ಮನೆಗೆ ಕಳ್ಸಿ ಸಾರ್... ಬರೇ ಕಳ್ಳಂಗ, ಕುರ್ರೆಂಗ, ಕೊತ್ತಿಗ, ಕುದ್ಕಂಗ.... ಮೇಯರ್‌ನೂ...

ಸಕ್ಸೇನಾ : ಒನ್ ಮಿನಿಟ್ (ಪೇಪರ್ ಪೆನ್ನು ತಕಂಡ್) ಈಗ ಎಕ್ಸ್‌ಪ್ಲೈನ್...

ಇಂಜಿನಿಯರ್ : ಕುರ್ರೆ ಹೇಳ್ರೆ ಮಂಗ, ಕೊತ್ತಿ ಹೇಳ್ರೆ ಬೆಕ್ಕು.. ಮಿಯಾಂವ್... ಕುದ್ಕ ಹೇಳ್ರೆ ನರಿಗ...

ಸಕ್ಸೇನಾ : ಸರಿ ಸರಿ.. ಎಲ್ಲರ ಕಳ್ಸಿನೆ... ನೀವು ಹೊರ್ಡಿ

ಇಂಜಿನಿಯರ್ : ಥ್ಯಾಂಕ್ಯೂ ಸರ್... (ನಿರ್ಗಮನ. ಬಾಚಯ್ಯ ದೋಚಯ್ಯ ಪ್ರವೇಶ)

ಬಾಚಯ್ಯ : ಸಾರ್... ನಮಸ್ಕಾರ

ದೋಚಯ್ಯ : ನಮಸ್ಕಾರ... ಸಾರ್...

ಸಕ್ಸೇನಾ : ಹ್ಲಾಂ... ಬನ್ನಿ..ಬನ್ನಿ

ಬಾಚಯ್ಯ : ಇವು ಮಾಜಿ ಗ್ರಾ.ಪಂ ಪ್ರೆಸಿಡೆಂಟ್ ಮಿ. ದೋಚಯ್ಯ.

ದೋಚಯ್ಯ : ಅವು ಸೊಸೈಟಿ ಡೈರೆಕ್ಟರ್ ಮಿ। ಬಾಚಯ್ಯ.

ಸಕ್ಸೇನಾ : ದೋಚಯ್ಯ, ಬಾಚಯ್ಯ. ದೋಚುವವು, ಬಾಚುವವು. ಏನ್ ಬಂದದ್

ದೋಚಯ್ಯ : ಏನಿಲ್ಲೆಪ್ಪಾ... ಹಿಂಗೆ ಮಾತಾಡ್ಸಿ ಪೋಯಿಂತ ಬಂದದ್...

ಬಾಚಯ್ಯ : ನೀವು ಸೆಂಟ್ರಲ್‌ಂದ ಬಂದದ್‌ಂತ ಗೊತ್ತಾತ. ಹಾಂಗೆ ಒಂದು ಗೌರವಾಂತ...

ಸಕ್ಸೇನಾ : ಮತ್ತೆ ಹೇಳಿ ಸಮಾಚಾರ....

ದೋಚಯ್ಯ : ಸಮಾಚಾರ.. ದೇ ಮೇಯರ್,

ಡೆವಲಪ್‌ಮೆಂಟ್, ಶೌಚಾಲಯ, ಶುಚಿತ್ವ, ಆಸ್ಪತ್ರೆ.... ತೊಂದರೆ ಇಲ್ಲೆ. ಎಲ್ಲ ಆದೆ ಎಲ್ಲ ಲ್ಯಾಕ್...

ಸಕ್ಸೇನಾ : ಸರಿ ನೀವು ದುಡ್ಡ್ ಏನಾರ್ ತಂದಳರಿಯಾ...?

ದೋಚಯ್ಯ : ಹ್ಹ... ದುಡ್ಡಾ (ಕಿಸೆಗೆ ಕೈ ಹಾಕಿ ಹುಡುಕಿ) ಇಲ್ಲೆನಾಂತ. ಬಾಚಯ್ಯ ನಿಮ್ಮಕ್ಕಲೆ ಉಟ್ಟಾ....

ಸಕ್ಸೇನಾ : ಇದ್ದರೆ ಸ್ವಲ್ಪ ಬೇಕಿತ್ತ್...

ಬಾಚಯ್ಯ : ನಾ... ಬಾಕನ ಬೇರೆ ಚಡ್ಡಿ ಹಾಕಿದ್ದಲ್ಲ. ದುಡ್ಡ್ ಅದರ್ಲಿ ಬಾಕಿ ಆತ್. ನಿಮ್ಮಕ್ಕಲೆ ಏನೂ ಇಲ್ಲೆನಾ..

ದೋಚಯ್ಯ : ಏನೋ ಹಂಞ ಚಿಲ್ಲರೆ ಇರೊಕು..

ಬಾಚಯ್ಯ : ತೆಗೆನಿ... ತೆಗೆನಿ... ನನ್ನ ಚಡ್ಡಿ ಕಿಸಿಲಿ ಏನೋ ಇದ್ದಾಂಗೆ ಆದೆ... (ಕೈ ಹಾಕುತ್ತಾನೆ)

ಸಕ್ಸೇನಾ : ಯಾಕೆ... ಎಂತಾತ್

ದೋಚಯ್ಯ : ಅದೇ ಬಾಕನ ಶರ್ಟ್‌ಚೇಂಜ್ ಆಗಿ...

ಬಾಚಯ್ಯ : ಅಂದಾಜಿ ಇತ್ತ್‌ಲೆ.... ಸೀದಾ ಬಂದ್ ಬುಟೋ...

ದೋಚಯ್ಯ : ಬಾಚಯ್ಯ ಹಂಞ ಉಟ್ಟುಯಾ (ತೆಗೆದು ಲೆಕ್ಕ ಮಾಡಿ) ಒಂದ್ ನೂರ ತೊಂಬತ್ತ್ ಉಟ್ಟು. ನಿನ್ನಕ್ಕಲೆ

ಬಾಚಯ್ಯ : ಲೆಕ್ಕ ಮಾಡ್ನೆ..

ದೋಚಯ್ಯ : ಲೆಕ್ಕ ಬೇಡಪ್ಪ.. ಇದ್ದದ್ ಕೊಡಿ...

ಬಾಚಯ್ಯ : ಒಂದು ನೋಟು ಒಳಗಿರಿಸಿ.... ಇನ್ನೂರು ಉಟ್ಟು.

ದೋಚಯ್ಯ : ಕೊಡು ಕೊಡು (ಇಬ್ಬರದ್ದೂ ಸೇರಿಸಿ ಕೊಡುತ್ತಾರೆ)

ಸಕ್ಸೇನಾ : ಓಕೆ... ಓಕೆ.... (ಲೆಕ್ಕ ಮಾಡಿ) ಮುನ್ನೂರತೊಂಬತ್ತು.. ಸರಿ ನೀವು ಹೊರಡಿ.. ಎಂ.ಓ ಮಾಡ್ನೆ...

ಇಬ್ಬರೂ : (ಕಕ್ಕಾಬಿಕ್ಕಿಯಾಗಿ) ಆದು ಸರ್.. ಎಂ.ಓ ಬೇಡ ಸರ್. ನಾವು ಬಂದವೆ (ಹೊರಟವರು ಮತ್ತೆ ಬಂದು)

ಬಾಚಯ್ಯ : ಸಾರ್... ಒಂದ್ ವಿಚಾರ ಹೇಳಿಕಿತ್ತ್. ನಮ್ಮ ದೋಚಯ್ಯನವರ ಮಂಜನ ಬೈಕ್ ಆ್ಯಕ್ಸಿಡೆಂಟ್ ಆಗಿ ಕಾಲು ಮುರ್ದ್.....

ದೋಚಯ್ಯ : ಕುಡ್ದ್ ರೈಡ್ ಮಾಡಿಟುಂತ ಎಲ್ಲ ಸುಳ್ಳು ಸುದ್ದಿ ಹೇಳ್ವೆ. ಸತ್ಯ ಹೇಳುಕುಂತಾರೆ ಅವ ಕುಡ್ದಿತ್‌ಲೆ. ಸ್ಕಿಡ್.....ಆದರ ಎದ್‌ರಂದ ಲಾರಿ ಬಾತಿತ್‌ಗಡ. ಸರ್... ಒಂದು ಸೆಂಟ್ರ್‌ಲ್‌ಂದ ಪರಿಹಾರ ಕೊಡ್ಸಿಕಾಗಿತ್ತ್. ಅರ್ಜಿ ತಂದಳೆ (ಕೊಡಲು ಹೋಗ್ತಾರೆ)

ಸಕ್ಸೇನಾ : ಓ.ಕೆ ಓಕೆ...

ದೋಚಯ್ಯ : ಮತ್ತೆ ನಮ್ಮ ಬಾಚಯ್ಯನ ಅಳಿಯ. ಕೆ.ಪಿ.ಎಸ್.ಸಿಗೆ ಪರೀಕ್ಷೆ ಬರ್ದುಂಟು. ಫಸ್ಟ್ ಕ್ಲಾಸ್ ಪಾಸ್... ಅದೊಂದು ಮಾಡಿಕೊಟ್ಟಿದ್ದರೆ.. ಪಾಪದವು....

ಸಕ್ಸೇನಾ : ಸರಿ... ಮಾಡಿಕೊಡೊಮೊ.... ನೀವೀಗ ಹೋಗಿ.

(ಇಬ್ಬರೂ ನಿರ್ಗಮನ ಡಾ। ಏದುಸಿರು

ಬಿಡುತ್ತಾ ಬಂದು)

ಕುಂಞಿ : ಸಾರು... ಞಾನು. ಡಾ। ಕುಂಞಿಕುಂಞಿ. ಇಲ್ಲಿ ಗವರ್ನ್‌ಮೆಂಡ್ ಡಾಕ್ಟರ್..

ಸಕ್ಸೇನಾ : ತಂದಳರಿಯಾ....

ಕುಂಞಿ : ಸರ್ ಉಂಡು... ಉಂಡು... (ಕವರ್ಎರಡೂ ಕೈಯಲ್ಲಿ ತೋರಿಸುತ್ತಾ)

ಸಕ್ಸೇನಾ : ಅಲ್ಲಿ ಇಸಿ ಹೋಗಿ

(ಇಟ್ಟು ಬೆವರು ಒರೆಸಿಕೊಂಡು ಓಡುವ ಶೈಲಿಯಲ್ಲಿ ನಿರ್ಗಮನ)

ಸಕ್ಸೇನಾ : ತಿವಾರಿ... ಇದರೊಮ್ಮೆ ಲೆಕ್ಕ ಮಾಡ್...

ತಿವಾರಿ : ಅಯ್ಯೋ... ಇದರ ಲೆಕ್ಕ ಮಾಡ್ರೇ ಬೊಳ್ದಾದು..

ಸಕ್ಸೇನಾ : ಮತ್ತೆ ನಾ ಹೇಳ್ದಲ್ಲ.... ನಸೀಬು ಇರೊಕು. ಸ್ವಲ್ಪ ತಲೆನೂ ಬೇಕು. ದುಡ್ಡ್ ಎಲ್ಲಿ ಬೇಕರೂ ಮಾಡಕ್ ಹೌದಾ... ಅಲ್ಲನಾ...

ತಿವಾರಿ : ಹೌದು ಬಾಸ್...

ಸಕ್ಸೇನಾ : ಇನ್ನ್ ಎಂತ

ತಿವಾರಿ : ಬಾಸ್.. ಇಷ್ಟರವರೆಗೆ ತೊಂದರೆ ಇಲ್ಲೆ. ನಿನ್ನೆ ರಾತ್ರಿ ಟೈಟ್ ಆಗಿ ಎಂತೆಲ್ಲ ಹೇಳ್ತಿದ್ದರಿ. ಅವು ಎಲ್ಲ ನಂಬ್ಯೊಳೊ. ಏನಾರ್ ಡೌಟ್‌ಮಿನಿ ಬಂದರೆ...

ಸಕ್ಸೇನಾ : ಬಂದರೆ....

ತಿವಾರಿ : ಕೋಳ ಹಾಕಿ ಏರೋಪ್ಲೇನ್ ಹತ್ಸುವೊ... ಸೀದಾ ಜೈಲ್‌ಗೆ....

ಸಕ್ಸೇನಾ : ತಿವಾರಿ.... ಮೆಲ್ಲ ಮಾತಾಡ್... ಈಗ ಎಂತ

ಮಾಡ್ದೊಂತ ನಿನ್ನ ಐಡಿಯಾ....

ತಿವಾರಿ : ಐಡಿಯಾ... ಸುಡುಗಾಡು ಇಲ್ಲೆ. ನಾವು ಮೆಲ್ಲ ಏನಾದರೂ ಹೇಳಿ... ಇಲ್ಲಿಂದೊಮ್ಮೆ ಜಾರಿ ಬುಡೊಮೊ...

ಸಕ್ಸೇನಾ : ಅದ್ ಸರಿ. ಈಗ ಹೊರ್ಡುವ ಪ್ಲಾನ್ ಹೇಂಗೆ..?

ತಿವಾರಿ : ಅದೆಲ್ಲ ನಂಗೆ ಬುಟ್‌ಬುಡಿ. ನೀವು ನಿಮ್ಮ ಕುದುರೆ ರೇಸ್‌ನ ಫ್ರೆಂಡ್‌ಗೆ ಫೋನ್ ಮಾಡಿ ಹೇಳಿ. ನಾವು ಮೂರು ದಿನಲಿ ಬಂದವೇಂತ...

ಸಕ್ಸೇನಾ : ಅವನ ಫೋನ್ ಸಿಕ್ಕುದುಲೆಯಾ..

ತಿವಾರಿ : ಹಾಂಗರೆ ಒಂದು ಕಾಗದ ಬರ್ದ್‌ಕೊಡಿ. ಸ್ಪೀಡ್ ಪೋಸ್ಟ್ ಮಾಡ್ನೆ..
(ಆಗ ಸದ್ದು ಯಾರೋ ಬರುವ ಸದ್ದು ಕೇಳಿಸುತ್ತದೆ)

ತಿವಾರಿ : ಮತ್ತೆ ಯಾರೋ ಬಂದನೋಂತ..

ಸಕ್ಸೇನಾ : ಬರ್ಲಿ... ಬರ್ಲಿ.. ನಾ ಒಳಗೆ ಹೋನೆ. ನಿಂಗೆ ಸಾಧ್ಯ ಆದಷ್ಟ್ ಅವರ್‌ಂದ ಕಿತ್ತ್‌ಕಾ...
(ಸಕ್ಸೇನಾ ಆಚೆ ಕುಳಿತು ಪತ್ರ ಬರೆಯುತ್ತಿರುವಾಗ ಮೂರು ವ್ಯಾಪಾರಿಗಳ ಪ್ರವೇಶ)

ತಿವಾರಿ : ಬನ್ನಿ.. ಬನ್ನಿ.. ಬಾಸ್ ಸ್ವಲ್ಪ ಬಿಝಿ ಒಳೊ... ನೀವು ಯಾರ್. ಏನ್ ಬಂದದ್.....

ವ್ಯಾಪಾರಿ : ನಾವು ಬಿಸಿನೆಸ್ ಪೀಪಲ್. ಚೇಂಬರ್ ಆಫ್ ಕಾಮರ್ಸ್.

ತಿವಾರಿ : ಓಹೋ..... ಏನು ಹೇಳಿ...

ವ್ಯಾಪಾರಿ 2 : ಸಾರ್... ಒಂದು ಮನವಿ ಇತ್ತ್. (ಕೊಡುವರು)

(ತಿವಾರಿ ಓದುವನು.) ಮೆಮೋರಂಡಂ ಸಬ್‌ಮಿಟೆಡ್ ಚೇಂಬರ್ ಆಫ್ ಕಾಮರ್ಸ್... ಎಂತ ಸಾವು ಒಂದು ತಲೆಗೆ ಹೋದುಲೆ. ಹ್ಞಂ.... ಅದೆಂತಂತ ಬಾಯಿಲೇ ಹೇಳಿಬುಡಿ. ಇದರ ಫೈಲ್ ಮಾಡುವೆ.

ವ್ಯಾಪಾರಿ 3 : ಸರ್.. ನಮ್ಮ ಬಚಾವ್ ಮಾಡೊಕು...

ಇಬ್ಬರೂ : ಸರ್ ಬಚಾವ್ ಮಾಡೊಕು

ತಿವಾರಿ : ಬಚಾವ್..? ಎಂತ ಆವುಟು... ಎಂತ ವಿಷಯ...?

ವ್ಯಾಪಾರಿ 1 : ಅನ್ಯಾಯ ಸಾರ್...

ವ್ಯಾಪಾರಿ 2 : ಅತ್ಯಾಚಾರ... ನಿಜವಾಗಿ ಅನ್ಯಾಯ...

ತಿವಾರಿ : ಕ್ಯಾ... ಅತ್ಯಾಚಾರ.... ಯಾರ್ ಮಾಡ್ದ್?

ವ್ಯಾಪಾರಿ 3 : ಒಂದೇ.. ಎರಡೇ...

ವ್ಯಾಪಾರಿ 1 : ದಬ್ಬಾಳಿಕೆ ನಡೆತಾ ಉಟ್ಟು... ಸರ್ವಾಧಿಕಾರ

ತಿವಾರಿ : ಸರ್ವಾಧಿಕಾರ.....

ವ್ಯಾಪಾರಿ 2 : ಅದೇ ಸಾರ್ (ಮೆಲುದನಿ) ನಮ್ಮ ಮೇಯರ್.

ವ್ಯಾಪಾರಿ 3 : ಮೇಯರ್ ಸರಿ ಮೇದವೆ....

ವ್ಯಾಪಾರಿ 1 : ಅವ್ಕೆ ಗವರ್ಮೆಂಟ್‌ನ ಕ್ಯಾರೇ ಇಲ್ಲೆ....

ತಿವಾರಿ : ಹ್ಹ..ಹ್ಹ.. ಹೇಳಿ ಹೇಳಿ....

ವ್ಯಾಪಾರಿ 1 : ನಮ್ಮ ಮೇಲೆ ಬಾರಿ ದೌರ್ಜನ್ಯ ಆಗ್ತಾ ಉಟ್ಟು.

ವ್ಯಾಪಾರಿ 2 : ಆ... ಟ್ಯಾಕ್ಸ್ ಈ ... ಟ್ಯಾಕ್ಸ್‌ಂತೇಳಿ ಸಿಕ್ಕಾಬಟ್ಟೆ ಕಿತ್ತವೆ.

ವ್ಯಾಪಾರಿ 3 : ಬಿಲ್ಡಿಂಗ್ ಡೇವಲಪ್‌ಮೆಂಟ್.. ವೆಲ್‌ಫೇರ್ ಫಂಡ್‌ಂತೇಳಿ ಆಗಾಗ 10000–20000 ಕೊಡೊಕು.

ವ್ಯಾಪಾರಿ 1 : ಮಾಲು ಸರಿ ಇಲ್ಲೆ. ಅಕ್ಕಿಲ್ಲಿ ಕಲ್ಲುಟ್ಟು, ಚಾ ಹೊಡಿಲಿ ಮರದ ಹೊಡಿ, ಮೆಣ್ಸನ ಹೊಡಿಲಿ ಮಣ್ಣ್, ಎಣ್ಣೆಗ ಪೂರಾ ಕಲಬೆರಕೆಂತೇಳಿ ಅಪಪ್ರಚಾರ ಮಾಡಿ ನಮ್ಮ ಲಗಾಡಿ ತೆಗ್ದವೆ. ರಾತ್ರಿಕಟ್ಟ್... ಕಟ್ಟ್.. ದುಡ್ಡ್ ಕಳ್ಸಿಂತ ಫೋನ್ ಮಾಡುವೆ.

ವ್ಯಾಪಾರ 2 : ಈಗ ಫೋನ್ ಮಾಡ್ದುಲೆ. ವಸೂಲಿಗೆ ಜನ ಬಂದವೆ. ಫೋನ್ ಟ್ರ್ಯಾಪ್ ಆದೇಂತ ಹೆದ್ರಿಕೆ.

ವ್ಯಾಪಾರಿ 3 : ಸಾರ್... ಅವರ ಹೆಣ್ಣ್ ಮತ್ತ್ ಮಗಳ್.. ಹೇಳಿ ಸುಖ ಇಲ್ಲೆ. ನಮ್ಮ ಬಟ್ಟೆ ಅಂಗಡಿಗೆ ಬಂದ್ ರೇಷ್ಮೆ ಸೀರೆ, ಚೂಡಿದಾರ್ ಅದ್ ಇದ್‌ಂತ ಕೋಸ್ಟಿಲಿದೆಲ್ಲ ಹೊತ್ತ್‌ಕಂಡೇ ಹೋದವೆ. ಒಂದ್ ಪೈಸೆ ಕೊಡಟಿಲ್ಲೆ. ಕೇಳ್ರೆ ಮಾರನೇ ದಿನ ಡಿ.ಎಸ್.ಪಿನೇ ಬಂದದೇ. ಅವನೂ ವಸೂಲಿಯೇ.

ತಿವಾರಿ : ಓ..ಹೋ.. ಅದೆಲ್ಲ ಉಟ್ಟಾ... ದೇಖಾ.... ದೇಖಾ...

(ತಿವಾರಿ ಗಂಭೀರವಾಗಿ ಹೇಳಿದಾಗ ಅವರೆಲ್ಲ ಗೊಂದಲಕೊಳ್ಳಗಾಗಿ ಮುಖ

ಮುಖ ನೋಡಿ)

ವ್ಯಾಪಾರಿ 1 : ಅಲ್ಲ... ಇದೆಲ್ಲ ದೊಡ್ಡ ಸಂಗತಿ ಅಲ್ಲ. ಬುಡಿಎ ಲ್ಲ ಕಡೆ ಇದ್ದದೇ.... ಏನೋ ಬೇಜಾರಾತ್ ಹೇಳ್ದೊ... ಅದರೆಲ್ಲ ಬುಟ್ಟ್ ಬುಡಿ ಸಾರ್....

ತಿವಾರಿ : ದೇಖೇಂಗೇ....

ವ್ಯಾಪಾರಿ 2 : ಇಸ್ಟ್ ದಿನ ಏಜೆಸ್ಟ್ ಮಾಡ್ಯೊಳೊ...ನಾವು ಎಜೆಸ್ಟ್ ಮಾಡಿಕಂಡವೆ.

ವ್ಯಾಪಾರಿ 3 : ಅವುನೂ ನಮ್ಮವೇ ಅಲ್ಲ. ಒಮ್ಮೊಮ್ಮೆ ಸಿಟ್ಟ್‌ಲಿ ಹಾರುವೆ. ಮತ್ತೆ ಬಾರಿ ಪೋರ್ಲುಲಿ ಇದ್ದವೆ. ಹಾಂಗೆಲ್ಲ ರಗಳೆ ಇಲ್ಲೆಪ್ಪಾ...

ವ್ಯಾಪಾರಿ 1 : ಸರ್ ಅದೆಲ್ಲ ತೊಂದರೆ ಇಲ್ಲೆ ಬುಡಿ. ನೀವು ಸೆಂಟ್ರಲ್‌ಂದ ಬಂದವಲ್ಲ. ಹಾಂಗೆ ನೋಡಿಕಂಡ್ ಪೋಯಿಂತ....

ವ್ಯಾಪಾರಿ 2 : ದರ್ಶನ ಮಾಡಿ ಗೌರವ ಸಲ್ಲಿಸಿ....

ವ್ಯಾಪಾರಿ 3 : ಹಾಂಗೇ ಏನಾರ್ ಕಾಣಿಕೆ..

ವ್ಯಾಪಾರಿ 1 : ಗಂಧದ ಮೂರ್ತಿ, ಶಾಲು..

ಸಕ್ಸೇನಾ : ಹಾಂಗೆಲ್ಲ ತಕಂಬದುಲೆಂತ ಅವ್ಕೆ ಹೇಳ್

ತಿವಾರಿ : ಕೇಳ್ತಲ್ಲ... ನಮ್ಮ ಬಾಸ್ ಅಂತದೆಲ್ಲ ತಂಕಂಬುದೆಲೆ...

ವ್ಯಾಪಾರಿ : (ಎಲ್ಲರೂ) ಅದಲ್ಲದರೆ ಇದ್ (ಎಲ್ಲರು ನೋಟಿನ ಕಂತೆ ಮೇಜಿನ ಮೇಲಿಡುತ್ತಾರೆ)

ವ್ಯಾಪಾರಿ 1 : ಸಾರ್... ನಾವು ನ್ಯಾಯ ನಿಯತ್ತ್‌ಂದ ವ್ಯಾಪಾರ ನಡೆಸ್ತಾ ಒಳೊ... ಸಣ್ಣ ಊರು..

ಬಿಸಿನೆಸ್ ಕಡಿಮೆ. ಹಾಂಗೆ ಟ್ಯಾಕ್ಸ್ ಒಂದು ಪೈಸೆನೂ ಬಾಕಿ ಮಾಡ್ದುಲೆ. ಹಾಂಗೇತ ಒಂದು ರಿಪೋರ್ಟ್ ಹಾಕಿ ಬುಟ್ಟರೆ ನಾವು ಧನ್ಯ.

ವ್ಯಾಪಾರಿ 2 : ನಮ್ಮ ಊರ್‌ನ ಸಮಸ್ಯೆ... ಆದ್ ಮೇಯರ್. ಅದೆಲ್ಲ ಸಣ್ಣದ್ ಸಾರ್ ಬುಟ್ಟ್‌ಬುಡಿ.

ತಿವಾರಿ : ಸರಿ..ಸರಿ.. ನೀವು ಹೊರ್ಡಿ....

ವ್ಯಾಪಾರಿ 3 : ಅದೇ ದೊಡ್ಡ ಸಾಹೇಬ್ರ ದರ್ಶನ ಆದ್ದ್ ತುಂಬಾ ಸಂತೋಷ ಆತ್.

ತಿವಾರಿ : ಆತ್...ಆತ್.... ಅವು ಬಿಝಿ. ನೀವು ಹೋಗಿ.....

ವ್ಯಾಪಾರಿ 1 : ಸಂತೋಷ....ಸಂತೋಷ...

ವ್ಯಾಪಾರಿ 2 : ಈ ಊರ್‌ಲಿ ಯಾವುದೇ ಸಮಸ್ಯೆಇಲ್ಲೆ ಸಾರ್.... ರಿಪೋರ್ಟ್......

ತಿವಾರಿ : ಆತ್... ಆತ್... ನೀವು ಹೊರಡಿ.

ಎಲ್ಲೂರು : ಹ್ಹ...ಹ್ಹ... ನಮಸ್ಕಾರ (ಹೋಗುತ್ತಾರೆ)

ಸಕ್ಸೇನಾ : ಎಷ್ಟ್ ಸಿಕ್ಕಿತ್‌ಯಾ...

ತಿವಾರಿ : ಧಾರಾಳಾ ಆತ್, ಫ್ಲೈಟ್‌ಗೆ ಸಾಕ್.. ಏರೋಪ್ಲೇನ್...

ಸಕ್ಸೇನಾ : ಓ.ಕೆ ನಾಳೆಗೆ... ಟಿಕೇಟ್ ಬುಕ್ ಮಾಡ್ಸ್... ಒಮ್ಮೆ ಜಾಗ್ರತೆಲಿ ಇಲ್ಲಿಂದ ಜಾಗ ಖಾಲಿ ಮಾಡ್ರೆ ಸಾಕ್. ಹಾಂಗೆ ಹೋಗಿ ಒಂದು ಟ್ಯಾಕ್ಸಿ ತಕಂಡ್ ಬಾ...

ತಿವಾರಿ : ಸರಿ ಬಾಸ್....

ಸಕ್ಸೇನಾ : ಟ್ಯಾಕ್ಸಿಲಿ ನೆಕ್ಸ್ಟ್ ಸಿಟಿಗೆ ಪೋಯಿ. ಈ ಊರ್

ಬೇಡ. ಅಲ್ಲಿ ಇಂದ್ ಹಾಲ್ಟ್ ಮಾಡಿ... ಬೆಳಗ್ಗೆ ಎದ್ದ್ ಸೀದಾ ಏರೋಡ್ರಾಂ... ಸುಯ್ಯಂ... ಸೀದಾ ಡೆಲ್ಲಿಗೆ... ಇಲ್ಲಿ ಕಲೆಕ್ಷನ್ ಸ್ವಲ್ಪ ಓವರ್ ಆತ್. ಸಿಕ್ಕಿ ಹಾಕಂಡ್ರೆ ಕಷ್ಟ.

ತಿವಾರಿ : ಸರಿ ಬಾಸ್ ಟ್ಯಾಕ್ಸಿ ತಂಕಂಡ್ ಬನ್ನೆ.... (ತಿವಾರಿ ಹೊರಡುವಾಗ ಮೋನಿಕಾ ಕಾಣಿಸುತ್ತಾಳೆ. ತಿರುಗಿ ಬಂದು ಸಕ್ಸೇನಾ ಜೊತೆ)

ತಿವಾರಿ : ಬಾಸ್... ಮೇಯರ್ ಡಾಟರ್....

ಸಕ್ಸೇನಾ : ಆಂ... ಎಲ್ಲಿ..?

ತಿವಾರಿ : ಪರವಾಗಿಲ್ಲೆ ಬಾಸ್... ನಾನೇ ಮ್ಯಾನೇಜ್ ಮಾಡ್ನೆ.

ಸಕ್ಸೇನಾ : ಕುರೆ... ನೀ ನಡೀ... ಟ್ಯಾಕ್ಸಿ ತಂಬಾಂತೇಳ್ರೆ.....

ತಿವಾರಿ : ಯಸ್... ಬಾಸ್ (ಒಮ್ಮೆ ತಿರುಗಿ ಮೋನಿಕಾಳನ್ನು ನೋಡಿ ಹೋಗುತ್ತಾನೆ. ಮೋನಿಕಾ ಪ್ರವೇಶ)

ಸಕ್ಸೇನಾ : ಓ.... ಬನ್ನಿ ಕಂ....ಕಂ..... ಹೌ ಹ್ಯಾಪಿ. ಬನ್ನಿ ಒಳಗೆ. ಎಲ್ಲೋ ಹೋರ್ಟಂಗೆ ಕಂಡದೆ.

ಮೋನಿಕಾ : ಇಲ್ಲೆ....

ಸಕ್ಸೇನಾ : ಓ..... ನನ್ನ ನೋಡಿಕೆ ಬಂದದಾ...?

ಮೋನಿಕಾ : ಇಲ್ಲೇ ಇಲ್ಲೇ..... ಸುಮ್ಮನೆ..

ಸಕ್ಸೇನಾ : ಅಂದರೆ

ಮೋನಿಕಾ : ಅಂದರೆ....ಅದ್...

ಸಕ್ಸೇನಾ : ಹ್ಹಾ.... ಹ್ಹಾ... ಗೊತ್ತಾತ್ ಗೊತ್ತಾತ್. ನೀವೆಂತ ಹೇಳ್ದು ಬೇಡ.

ಮೋನಿಕಾ : ನಾ... ಬಂದದ್ ಏನಾರ್ ಉಪದ್ರ ಆತಾ ಹೇಂಗೆ?

ಸಕ್ಸೇನಾ : ಚೇ.... ಚೇ.... ಇಲ್ಲೆಪ್ಪಾ ಉಪದ್ರ ಎಂತ (ಧೈರ್ಯ ಮಾಡಿ) ನಿನ್ನ ಹಾಂಗೇ ನೋಡಿಕಂಡ್ ಇದ್ದರೆ ಬೇರೆ ಎಂತದೂ ಬೇಡಂತಾದೆ (ಬೇಡಾಂತ ಅನ್ನಿದೆ) ಅದಕ್ಕಿಂತ ದೊಡ್ಡ ಪ್ರಯೋಜನದ ಕೆಲ್ಸ ಈ ಜಗತ್ತ್‌ಲೆ ಇಲ್ಲೆ. ಹಚ್ಚ ಹಸಿರಿನ ಸುಂದರ ಬೆಟ್ಟದ ಮರೆಯಲ್ಲಿ ಸುಂದರ ಚಂದಿರನಾಗಮನ.... (ಇದೇ ಅರ್ಥದ ಶಾಯಿರಿ ಹೇಳುತ್ತಾನೆ)

ಮೋನಿಕಾ : ಡೆಲ್ಲಿ ಪೀಪಲ್ ಎಲ್ಲ ಹೀಂಗೆ ಮಾತಾಡ್ದ್ಲೋ ಸಾರ್..

ಸಕ್ಸೇನಾ : ಓಹ್... ನಿಮ್ಮ ವರ್ಣಿಸಿಕೆ ಯಾವ ಮಾತೂ ಸಾಕಾಕಿಲೆ. ಡೆಲ್ಲಿ ಮಾತೂ ಸಾಲದ್, ಇಲ್ಲಿನ ಮಾತೂ ಸಾಲದ್. ಒಂದು ಪೋಲ್ಟ್ರಿನ ಪದ್ಯನೇ ಹೇಳೊಕೊ...

ಮೋನಿಕಾ : ಸರ್... ನಂಗೋದು ಫೇವರ್ ಮಾಡಿಕಾದೋ... ಪ್ಲೀಸ್

ಸಕ್ಸೇನಾ : ನಿಂಗೇ....? ಫೇವರ್.. ನಿನ್ನಂಥವಳಿಗೆ ನಾ ಫೇವರ್ ಮಾಡುದಲ್ಲ. ನೀನೇ ಫೇವರ್ ಮಾಡೊಕು. ಟೇಲ್ ಮಿ. ಅದೇನ್ ಹೇಳ್. ನಾ ಮಾಡುವಂತ ಫೇವರ್. ಈ ಕನ್‌ಫ್ಯೂಸ್ಡ್ ವರ್ಲ್ಡ್‌ಲಿ...

ಮೋನಿಕಾ : ಈ ಡೈರಿಲಿ ನಂಗೋದು ಪೋಯಮ್ ಬರ್ದ್ ಕೊಟ್ಟರಿಯಾ. ಕೆಳಗೆ ನಿಮ್ಮ

ಆಟೋಗ್ರಾಫ್.

ಸಕ್ಸೇನಾ : ಓ...ಶೂರ್.... (ಪುಸ್ತಕ ತೆಗೆದುಕೊಂಡು) ಆದರೆ ನೀ ಇಲ್ಲೇ ಕುದ್ರೊಕು. ಹಾಂಗಿದ್ದರೆ ಮಾತ್ರ.

(ಆಕೆ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾಳೆ)

ಸಕ್ಸೇನಾ : (ಸ್ವಗತ) ಈಗ ಎಂತ ಬರಿಯೋದು. ತಲೆಗೇ ಹೋದುಲೆ. (ಏನೋ ಬರೆಯುತ್ತಾನೆ) ಇಂದಾ ಓದಿನೆ ಕೇಳ್ (ಓದುತ್ತಾನೆ) ಹೇಂಗೆಟ್ಟು ಲಾಯಿಕುಟ್ಟಾ....

ಮೋನಿಕಾ : (ನಾಚಿ) ಹೂಂ....

ಸಕ್ಸೇನಾ : ನಿನ್ನ ಸ್ಕರ್ಟ್ ಸ ಬಾರಿ ಪೋರ್ಲುಟ್ಟು.... ನಿನ್ನಂಗೆ

ಮೋನಿಕಾ : ಥೂ.... ಎಂತ ನೀವು .... ಸುಮ್ಮಂಗಿರಿ ಸಾರ್....

ಮೋನಿಕಾ : (ವಿಷಯ ಬದಲಿಸುತ್ತಾ) ಸರ್. ಇಲ್ಲಿ ನೋಡಿ ಸರ್... ಒಂದು ಸೆಲ್ಫಿ

ಸಕ್ಸೇನಾ : ವಾವ್ವ್... ಬ್ಯೂಟಿಫುಲ್ (ನಿಧಾನಕ್ಕೆ ಆಕೆಯ ಹೆಗಲ ಮೇಲೆ ಕೈ ಹಾಕಿದೆ)

ಮೋನಿಕಾ : (ಗಾಬರಿಯಿಂದ ಎದ್ದು) ಸರ್... ಹಿಂಗೆಲ್ಲ... ಇದೆಂತ ನೀವೆಂತ...

ಸಕ್ಸೇನಾ: : ಓಹ್... ಸಾರಿ... ಏನೋ ತಪ್ಪಾಗಿ ಹೋತು. ಸ್ಸಾರಿ.. ಪ್ಲೀಸ್ ಕ್ಷಮಿಸ್... ಪ್ಲೀಸ್. ದಯಮಾಡಿ ಇದರ ಯಾರೊಟ್ಟಿಗೂ ಹೇಳ್ಬೆಡ (ಆಕೆಗೆ ಗಾಬರಿ ಗೊಂದಲ) ಪ್ಲೀಸ್.... ಯಾರೊಟ್ಟಿಗೂ ಹೇಳ್ದುಲೆಂತ

ಹೇಳ್... ಯಸ್... ಯಸ್.... ತಪ್ಪಾತ್ ಬೇಕರೆ ನಿನ್ನ ಕಾಲ್ ಹಿಡ್ದನೆ. ಸ್ಸಾರಿ.....
(ಅವಳ ಎದುರು ಮಂಡಿಯೂರಿ ಕುಳಿತುಕೊಳ್ಳುತ್ತಾನೆ. ಅದೇ ಹೊತ್ತಿಗೆ ಕಾವೇರಿ ಪ್ರವೇಶ)

ಕಾವೇರಿ : ಅಯ್ಯಯ್ಯೋ.... ಇದೆಂತ ಕಥೆ... ಅವರ ನೆಲದ ಮೇಲೆ ಕುದ್ರಿಸಿ.... ಚೇ...ಚೇ....

ಸಕ್ಸೇನಾ : ನೋ...ನೋ.... ಸ್ಸಾರಿ... ಅದ್ ಹಾಂಗೆಲ್ಲ....

ಕಾವೇರಿ : ಚೇ.....ಅಂಥಾ ದೊಡ್ಡ ಆಫೀಸರ್ನ... ಕೆಳಗೆ ಕುದ್ರಿಸಿದಾ. ನಿನ್ನ ಹಾಂಕಾರಕ್ಕೆ.....ದಗಣೆ..

ಸಕ್ಸೇನಾ: : ಇಲ್ಲೆ... ಇಲ್ಲೆ... ಅದ್ ಹಾಂಗಲ್ಲ... ನಾನೇ... ನಾನೇ...

ಕಾವೇರಿ : ಅಯ್ಯೊ ನೀವು ದೊಡ್ಡವು. ನಿಮ್ಮ ಗುಣ ದೊಡ್ಡದ್, ಅದ್ಕೆಗೆ ಬುದ್ದಿ ಇಲ್ಲೆ. ನಿಂಗೆ ಎಂತ ರೋಗ ಬಡ್ದ್‌ಟು. ಗೊಂಬೆನಂಗೆ ನಿತ್ತಳಲ್ಲ. ನಡಿ ಒಳಗೆ...
(ಮೋನಿಕಾ ಓಡುತ್ತಾಳೆ)

ಕಾವೇರಿ : ಚೇ...ಅಲ್ಲ ನೀವು ಬೇಜಾರ್ ಮಾಡಿಕಂಬಡಿ...

ಸಕ್ಸೇನಾ : ಸತ್ಯ ಹೇಳ್ನೆ... ಅವ್ಳು ಬಾಕೆ ಮುಂದೆನೇ ನಾ ಹಿಂಗೇ ಕುದ್ದ್‌ಕಂಡ್ ಇದ್ದೆ.

ಕಾವೇರಿ : ಅಯ್ಯೊಯ್ಯೋ ಈ ನೆಲಲಿ ಧೂಳ್.. ಮಣ್ಣ್‌ಲಿ...

ಸಕ್ಸೇನಾ : ಅವ್ಳು ಸಡನ್ನ್ ಬಾತಾ.. ನಂಗೆ ಎಂತ ಮಾಡೊಕುಂತ ಗೊತ್ತಾಗದೆ ಹಾಂಗೆ ಕುದ್ದೆ.

ಕಾವೇರಿ : ನೀವು ಇಂಥಾ ಗಲೀಜ್ ಕಾರ್ಪೆಟ್

ಮೇಲೆ.... ಚೇ...

ಸಕ್ಸೇನಾ : ನಿಜ ಹೇಳಕಾ... ನಾ ರಾತ್ರಿಯಿಡಿ ಹೀಂಗೇ ಕುದ್ದಿದ್ದೆ. ಅವ್ರು ಬಂದದೇ ಗೊತ್ತಾತ್‌ಲೆ... ಪ್ರೇಮ... ಪ್ರೇಮ ಲೋಕಲಿ ಹಾಂಗೇ ಕರಗಿ ಹೋಗಿದ್ದೆ... (ಭಾವುಕನಾಗಿ)

ಕಾವೇರಿ : ಪ್ರೇಮ.... ಪ್ರೇಮಲೋಕ... ಅಲ್ಲ ನನ್ನ ಮಗ್ಳ್...

ಸಕ್ಸೇನಾ : ಅಯ್ಯೋ..ಅಯ್ಯೋ... ನೀವ್‌ಗೆ ಗೊತ್ತಾದುಲೆ. ನಿಮ್ಮ ಮಗಳಲ್ಲ ನೀವೇ... ಮತ್ತೆ ನಿಮ್ಮ ನೋಡ್‌ದಲ್ಲಿಂದ ಎದೆಲಿ ಏನೋ ಒಂದು ಚಳಕ್ ಚಳಕ್‌ಅಂತ. ಒಂಥರಾ ವಿಚಿತ್ರ. ಎಲ್ಲೋ ತೇಲಿ ಹೋದಂಗೆ... ಅದೇ ಹೇಳ್ದೆ ಅಲ್ಲ. ರಾತ್ರಿ ಇಡೀ ಹೀಂಗೇ ಕುದ್ದ್‌ಕಂಡ್... ನೀವೇ ಎದ್‌ರ್ ನಿತ್ತಳರಿ ಅಂತ ತಿಳ್ಕಂಡ್...

ಕಾವೇರಿ : ನಿಮ್ಮದೆಂತ ಕಥೆ

ಸಕ್ಸೇನಾ : ಬುಡಿ... ಪ್ರೀತಿಗೆ ಕಣ್ಣಿಲ್ಲೇ.... ಕುರುಡು... ನಾ.. ಅಯೋಗ್ಯ.... ಆದರೆ ನಿಮ್ಮ ರೂಪ ಅದೆಂತದೋ ಮೋಡಿ ಹಾಕಿ ಬುಟ್ಟ್‌ಟು ನಂಗೆ. ಈಗ ನನ್ನ ಜೀವ ಉಳ್ಸುದು ಬುಡ್ದು ನಿಮ್ಮ ಕೈಲಿ ಉಟ್ಟು ಅಷ್ಟೇ...

ಕಾವೇರಿ : ಥೂ... ಹೋಗ್ಯಪ್ಪ... ನೀವೆಂಥ..ಎದ್ರಿ.. (ಎಬ್ಬಿಸಲು ಪ್ರಯತ್ನಿಸುತ್ತಾ) ನೀವು ಹಾಂಗೆಲ್ಲ ಹೇಳಿಕಾಗದ್ ನಾ.. ಎಷ್ಟಾದರೂ ಮದುವೆ ಆದವ್ಳ್.

(ತಟ್ಟನೆ ಮೋನಿಕಾ ಪ್ರವೇಶ)

ಮೋನಿಕಾ : ಮಮ್ಮಿ... ಮಮ್ಮಿ...

ಕಾವೇರಿ : (ಸಾವರಿಸಿಕೊಂಡು) ಥೂ... ಇದೆಂತ.. ಒಂದ್ ಮಾನ ಮರ್ಯಾದೆ ಇಲ್ಲೆ. ಯಾರಿಲ್ಲೆ ಯಾರೊಳೊ ಅಂತ ನೋಡಿಕಂಬಕೆ ಆದುಲೆನ. ಸೀದಾ ಹುಗ್ಗ್ದೆನಾ...

ಮೋನಿಕಾ : (ಗಾಬರಿ) ಮಮ್ಮಿ...

ಸಕ್ಸೇನಾ : (ಬದಲಾಯಿಸುತ್ತಾ) ನೋಡಿ ವಿಷಯ ಮುಚ್ಚಿ ಇಸಿ ಏನೂ ಸುಖ ಇಲ್ಲೆ. ವಿಷಯ ಅಪ್ಪಿಗೂ ತಿಳ್ಸಿ. ಹೇಳದಿರಕೆ ಆದೆನಾ. ಅವಳ ಒಪ್ಪಿಗೆ ಮುಖ್ಯ ಅಲ್ಲ. ಅಪ್ಪಿಗೆ ನಾ ಒಪ್ಪಿಗೆನಾ... ಅಂತ ಕೇಳಿ ನೋಡಿ. ಒಪ್ಪಿಗೆ ಇದ್ದರಲ್ಲ ಮುಂದೆನಾ ವಿಚಾರ.

ಕಾವೇರಿ : (ಬಜಾವಾದೆ ಎಂಬಂತೆ ಸಾವರಿಸಿಕೊಳ್ಳುತ್ತಾಳೆ. ಮೋನಿಕಾ ನಾಚಿಕೊಳ್ಳುತ್ತಿದ್ದಂತೆ ಮೇಯರ್ ಪ್ರವೇಶ)

ಮೇಯರ್ : ಫಟಿಂಗರ್, ಕಳ್ಳರ್, ಮೋಸಗಾರರ್, ಬದ್ಮಾಷ್, ರಾಸ್ಕಲ್, ಯೂಸ್‌ಲೇಸ್... ಕಿಲ್‌ಯೂ.. ಕಿಲ್‌ಯೂ...

(ಸಕ್ಸೇನಾ ಹೆದರಿ ನಡುಗುತ್ತಾನೆ)

ಮೇಯರ್ : ಐ ಮೀನ್.. ದಯಮಾಡಿ ನೀವು ನಂಗೆ ಕ್ಷಮೆ ಕೊಡೊಕು. ರಾಸ್ಕಲ್ಸ್... ನಾ ಹೇಳಿದ್ದೆ... ಕಾನ್ಸ್‌ಟೇಬಲ್‌ಗಳಿಗೆ. ಯಾರೂ ಬಂದರೂ ಒಳಗೆ ಬುಡ್ಬಡಿ ಅಂತ. ಆ ವ್ಯಾಪಾರಿ ಸಂಘದವು ಹೇಳದೆ ಕೇಳದೆ ಬಂದ್ ಬುಟ್ಟೊಳೊ. ಅಲ್ಲ... ನೀವ್ಗೆ ತೊಂದರೆ

ಆಕೆ ಬೊತ್ತೊಂತ. ನಾವು ಜಾಗ್ರತೆ ಮಾಡ್ರೆ. ಈ ಕಳ್ಳ ನನ್ನ ಮಕ್ಕ ದನ ಹುಕ್ಕಂಗೆ ಹುಕ್ಕ್ ಬುಟ್ಬೊಳೊ.... ಚಾಡಿಕೋರಂಗ. ಎಂತೆಲ್ಲ.. ಬೊಗಳಿ ಹೋಗೊಳೊನಾ... ಹಾಳಾಗಿ ಹೋಕು... ಸಾರ್... ನೀವು ಅವರ ಮಾತಿಗೆ ಬೆಲೆ ಕೊಡ್ಬಡಿ. ಅವು ಹಾಂಗೆನೆ. ಲಬಾಡಿ ಹೊಡ್ದ್ ದುಡ್ಡ್ ಮಾಡ್ದು ಮತ್ತೆ ಸುಳ್ಳು ಸುಳ್ಳೇ ಚಾಡಿ ಹೇಳ್ದು.

ಸಕ್ಸೇನಾ : (ಸಾವರಿಸಿಕೊಂಡು) ಚೇ...ಚೇ... ಅವರ ಮಾತ್‌ನ ಯಾರ್ ನಂಬುವೆ.... ನಾ ನಿಮ್ಮ ಮಿಸೆಸ್‌ಗೆ ಹೇಳ್ತಾ ಇದೆ.

ಮೇಯರ್ : ಲೋಫರ್ಸ್... ರಾಸ್ಕಲ್... ನಮಕ್ ಹರಮ್... ಮೋಸಗಾರರ್, ಘಟಂಗರ್..

(ಸಕ್ಸೇನಾ ಗಾಬರಿ)

ಮೇಯರ್ : ಸರ್... ಈ ವರ್ತಕರಿಗೆ ಕಾಮನ್‌ಸೆನ್ಸ್ ಇಲ್ಲೆ. ಅವರ್‌ಂದಾಗಿ ಈ ಊರ್‌ನ ಮರ್ಯಾದೆ ಮೂರು ಕಾಸಾವುಟು.. ದರಿದ್ರಗ...

ಸಕ್ಸೇನಾ : ಓ.ಕೆ.... ಓ.ಕೆ ಅವರ ವಿಷಯ ಬುಡಿ (ಸಾವರಿಸಿಕೊಳ್ಳುತ್ತಾ) ನಾ... ನಿಮ್ಮ ಮಿಸೆಸ್‌ನೊಟ್ಟಿಗೆ.....

ಕಾವೇರಿ : ಅಲ್ಲ.... ಅವು ಎಂತ ಹೇಳ್ದುಂತೇಳ್ರೆ...

ಮೇಯರ್ : ನೀ... ಸುಮ್ಮಂಗೀರ್... ಸುಮ್ಮಂಗೀರ್‌ತೇಳ್ರೆ ಸುಮ್ಮಂಗಿರೋಕು. ಅಲ್ಲ ಸಾರ್.. ನಿಜ ಹೇಳೊಕುಂತೇಳ್ರೆ...

ಕಾವೇರಿ : ಅಯ್ಯೋ.... (ಮೇಯರನ್ನು ಪಕ್ಕಕೆ

ಎಳೆದೊಯ್ದು) ಅಲ್ಲ... ಆಫೀಸರ್ ಎಂತ ಹೇಳ್ದುಂತೇಳ್ರೆ...

ಮೇಯರ್ : ಅವೆಂತದ್ದೇ ಹೇಳಲಿ. ನಾ ಅವರ ಬುಡಿಕಿಲೆ (ಆಚೀಚೆ ಶಥಪತ) ನೀವು ಬೇಕರೆ ತಪಾಸಣೆ ಮಾಡಿ. ನಾ ಹೆದ್ರುದುಲೆ... ಯಾಕೆ ಹೆದ್ರೊಕು...

ಕಾವೇರಿ : ಓ... ಮಾರಾಯ್ರೆ.... ಅದಲ್ಲ ವಿಷಯ.. (ಒಂದು ಕಡೆ ಎಳೆದೊಯ್ದು ವಿಷಯ ವಿವರಿಸುತ್ತಾಳೆ. ಮೂಕಾಭಿನಯ. ಆಗ ಮೋನಿಕಾ ಇಣುಕಿ ನೋಡಿ. ಸಕ್ಸೇನಾಗೆ ನಗುವಿನ ವಿನಿಮಯ. ನಾಚಿ ಓಡುವಳು. ಪುನಃ ಪ್ರವೇಶ. ಸಕ್ಸೇನಾ ಅವಳ ಬಳಿ ಸಾರಿ ಹತ್ತಿರ ನಿಂತು ಮಾತು, ನಗು. ದೂರದಿಂದಲೇ ಮೇಯರ್ ಅದನ್ನು ನೋಡುತ್ತಾ ಸಂತಸಗೊಳ್ಳುತ್ತಾನೆ)

ಮೇಯರ್ : ಲುಕ್ ಹಿಯರ್... ಹ್ಞಂ.. ಅವ್ ಇಬ್ಬೊರು ಹಕ್ಕಲೆ ಹಕ್ಕಲೇ ನಿತ್ತೊಳೊ.... ನೆಗಾಡುವೆ.. ಮಾತಾಡ್ತಾ ಒಳೊ... ಹ್ಹೆ...ಹ್ಹೆ.... ಮೇಯರ್ ಮುತ್ತಣ್ಣ... ನೌ. ಫಾದರ್ ಇನ್ ಲಾ ಆಫ್‌ದ ಗ್ರೇಟ್ ಸೆಂಟ್ರಲ್ ಆಫೀಸರ್. ಕಿಪ್ ಇಟ್ ಆಫ್ ಮುತ್ತಣ್ಣ. ನಿನ್ನ ಜನ್ಮ ಸಾರ್ಥಕ ಆತ್.

ಕಾವೇರಿ : ಓ... ಸುಮ್ಮನಿರಿ... ನಿಮ್ಮದೆಂತಾ ಅವತಾರ? (ಆಗ ಹೊರಗೆ ಕಾರಿನ ಹಾರ್ನ್ ಕೇಳುತ್ತದೆ. ತಿವಾರಿ ಬರುತ್ತಾನೆ)

ತಿವಾರಿ : ಸಾರ್.. ಟ್ಯಾಕ್ಸಿ ರೆಡಿ...

ಸಕ್ಸೇನಾ : ಹಾಂ...ಹಾಂ.... ಬಂದೆ ಎಲ್ಲಾ ರೆಡಿ ಮಾಡ್ (ಮೋನಿಕಾಳ ಬಳಿ ಮಾತಾಡತೊಡಗುತ್ತಾನೆ)

ತಿವಾರಿ : ಸಾಬ್... ಕೊಡ್ಲೆ ಹೊರ್ಡ್ಕುಗಡ.

ಸಕ್ಸೇನಾ : ಬಂದೆ ಮಾರಾಯ... ಎಂತ ಜೀವ ತಿಂಬೋದು. ನೀ ಲಗೇಜ್ ಎಲ್ಲ ಕಾರ್‌ಲಿ ಇಸ್ (ತಿವಾರಿ ಒಳಗೆ ಹೋಗಿ ಎರಡು ಬ್ಯಾಗ್ ಸೂಟ್‌ಕೇಸ್ ಹಿಡಿದುಕೊಂಡು ಇನ್ನೊಂದು ಕಡೆ ಹೋಗ್ತಾನೆ)

ಮೇಯರ್ : (ಗಾಬರಿ) ಖಾವಂದರ್ ದೂರ ಹೊರ್ಟದ್. ಐ ಮೀನ್...

ಸಕ್ಸೇನಾ : ಹಾಂ..... ಇಲ್ಲೆ... ಒಮ್ಮೆ ಸಿಟಿಗೆ ಹೋಗಿ ಬಂದವೆ.

ಮೇಯರ್ : ಇಷ್ಟ್ ಬೇಗ. ಹೋಗೇಹೋಕ..ಅರ್ಜಂಟ್...

ಸಕ್ಸೇನಾ : ಸ್ವಲ್ಪ ಅರ್ಜಂಟ್‌ಇತ್ತ್. ಒಂದರ್ಧ ಗಂಟೆ ಅಷ್ಟೇ. ಹಾಂಗೆ ಹೋಗಿ ಹೀಂಗೆ ಬಂದವೆ.

ಮೇಯರ್ : ನಮ್ಮ ಕಾರ್‌ಲೇ ಹೋಕಾತ್.

ಸಕ್ಸೇನಾ : ಅಯ್ಯೋ.... ನೀವ್ಗೆ ಯಾಕೆ ತೊಂದರೆ. ಟ್ಯಾಕ್ಸಿ ಬಂದ್‌ಟು. ಬೇರೆ ಎಂತಾದೂ ಬೇಡ... ಆದರೂ...

ಮೇಯರ್ : ದುಡ್ಡ್ ಏನಾರ್ ಬೇಕಿತ್ತಾ...

ಸಕ್ಸೇನಾ : ದುಡ್ಡ್ ಉಟ್ಟು. ಆದರೂ ಹೊಸ ಊರು ಅಲ್ಲ. ಬೇಕಾಕೂ ಸಾಕ್. ಇದ್ದರೆ ಹಂಞ ಕೊಡಿ. ಡೆಲ್ಲಿಂದ ದುಡ್ಡ್ ಬಂದಿರ್ದು. ಬಂದರೆ ಡ್ರಾ ಮಾಡಿಕಂಡ್ ಬಂದವೆ.

ಮೇಯರ್ : ಚೇ...ಚೇ.... ನೀವು ತೊಂದರೆ ಮಾಡಿಕಂಬಡಿ (ಕಿಸೆಂದ ಹಣ ತಂದುಕೊಡುತ್ತಾನೆ) ಸ್ವಲ್ಪ ಹೆಚ್ಚಿಗೆ ಉಟ್ಟು.

ಸಕ್ಸೇನಾ : ಇಂದ್ ಆದರೆ ಬಂದವೆ. ಕೆಲ್ಸ ಲೇಟ್ ಆದರೆ ನಾಳೆ ಬೆಳಗ್ಗೆ ಎತ್ತುವೆ. ಹಿಂಬೊತ್ತ್ ಆದರೂ ಗಡಿಬಿಡಿ ಮಾಡ್ಬಡಿ.

ಮೇಯರ್ : (ಸಮಾಧಾನದಿಂದ) ಹ್ವಾ... ಹ್ವಾ..

ಸಕ್ಸೇನಾ : ಹಂ... ನೀವ್ಗೆ ತುಂಬಾ ತೊಂದರೆ ಕೊಟ್ಟೆ. ಕ್ಷಮೆ ಇರ್ಲಿ... (ಕಾವೇರಿಗೆ) ಬಂದವೆ. ಎರಡ್ ದಿನ ಅಷ್ಟೇ ಮೋನಿ ಡಿಯರ್... Don't get Angry.... sure come soon....

ಮೋನಿಕಾ : ಐ ಮೀನ್.... ಹ್ಯಾಪಿ ಜರ್ನಿ.. ವಿಶ್ ಯೂ ಹ್ಯಾಪಿ ಜರ್ನಿ (ಹಾಗೆ ಹೊರಟು ಹೋದವನು ಪುನಃ ಬಂದು ಭಾವುಕನಾಗಿ) ಹಾಂ.. ಮೀ ಮುತ್ತಣ್ಣ ನೀವು ನಮ್ಮ ಬಾರೀ ಪ್ರೀತಿ ಗೌರವಲಿ ನೋಡಿಕಂಡರಿ. ನಿಮ್ಮ ಆತಿಥ್ಯಕ್ಕೆ ಪ್ರೀತಿಗೆ ನಾವು ಸದಾ ಋಣಿ. ಅಷ್ಟೆ. ನಾ.. ಏನೂ ಮಾತಾಡ್ದುಲೆ. ಮಾತಾಡಿಕೂ ಆದುಲೆ. ನಿಜವಾಗಿ ಎದೆ ತುಂಬಿ ಬಂದದೆ.... ಬಂದವೆ.....

ತಿವಾರಿ : ಬಂದವೆ ಸಾಬ್... ಅಮ್ಮಾ ಬಂದವೆ....

ಸಕ್ಸೇನಾ : ಅಮ್ಮಾ ಬಂದವೆ. ಬ್ಯಾ.... ಮೋನಿ

(ಅವರು ಕೈ ಬೀಸುತ್ತಾ ಹಿಂದೆ ಹಿಂದೆ ನಡೆಯುತ್ತಾರೆ. ಮೂವರು ಕೈ ಬೀಸುತ್ತಿದ್ದಾರೆ)

**ಕತ್ತಲೆ ... ನಾದಸ್ವರ**

# ಅಂಕ 5

## ಮೇಯರ್ ಮನೆ

(ಮೇಯರ್ ಗಡಿಬಿಡಿಯಲ್ಲಿ ಪ್ರವೇಶ)

ಮೇಯರ್ : ಗುಡ್ಡಪ್ಪಾ.. ಗುಡ್ಡಪ್ಪಾ...

ಗುಡ್ಡಪ್ಪ : ಸಾರ್... ಬಂದೇ...

ಮೇಯರ್ : ಲುಕ್ ಹಿಯರ್... ನೀವ್ಗೆ ಒಂದೂ ಸೀರಿಯಸ್‌ನೆಸ್ ಗೊತ್ತಾದುಲೆ. ಐ ಮೀನ್ ಈ ಸಾಮಾನ್ಯ ಪರಿಸ್ಥಿತಿ ಯಾವ್ದು. ಈ ತುರ್ತು ಪರಿಸ್ಥಿತಿ ಯಾವ್ದು ತ...

ಗುಡಪ್ಪ : ಇದ್... ಆಚೆ ಮನೆಗೆ ಎಮ್ಮೆಗೆ ಹುಚ್ಚ್ ನಾಯಿ ಕಚ್ಚಿತ್‌ಗಡ. ಅದ್ ಬೊಬ್ಬೆ ಹೊಡ್ಕಂಡ್ ಉಟ್ಟು.

ಮೇಯರ್ : ಓ.... ನಿಂಗೆ ಕಚ್ಚಕಾಗಿತ್ತ್... ಅದಲ್ಲ ನಾ ಹೇಳ್ದ್. ನೀವ್ಗೆ ಎಂತದೂ ಅರ್ಥ ಆದುಲೆ. ನೀ ಬೇಗ ಹೋಗಿ ಆ ಪೈಂಟರ್ ಬಾಲನ ಬಾಕೆ ಹೇಳ್. ಎರ್ಡ್ ದಿನಲಿ ಪೈಂಟಿಂಗ್ ಆಕು. ಮನೆ ಇಡೀ ಕಂಪ್ಲೀಟ್ ಆಕು. ಬಾಕನ ಡಿಸ್ಟೆಂಪರ್... ಡಿಸ್ಟೆಂಪರ್ ಬೇಡ... ಅದರ್‌ಂದ ಆಚೆದ್ ಐ ಮೀನ್‌ಎಕ್ಸೆಲ್ಲೊ.... ಪ್ರೀಮಿಯರೋ ಅದೆಂತದೋ ಈಗ ಬಂದುಟುಗಡ. ಆದರ್ನೆ ಕೇಳಿ ತಕಂಡ್ ಬಾ... ಬೇಗ ಬೇಗ....

(ಕಾವೇರಿ ಪ್ರವೇಶ)

ಕಾವೇರಿ : ಎಂತದ್ ಆತ್... ಆಗಂದ ಬೊಬ್ಬೆ ಹೊಡೆತಾ ಒಳರಿ...

ಮೇಯರ್ : ಅಲ್ಲ ಮಾರಾಯ್ತಿ... ನಿಂಗೆನೂ ಸೀರಿಯಸ್‌ನೆಸ್ಸ್ ಇಲ್ಲೆ... ಐ ಮೀನ್ ಹೆಚ್ಚ್‌ಕಮ್ಮಿ ಮದುವೆ ನಿಗಂಟ್ ಆದಂಗೆನೆ... ಒಂದ್ ವಾರಲಿ ಮದುವೆ, ಡಿನ್ನರ್ ಎಲ್ಲಿ ಮುಗಿಯೊಕು. ಅವ್ಕೆ ಹೆಚ್ಚ ರಜೆ ಇರಿಕಿಲೆ. ನೀ ಎಂತದೂಂಗುದು.. ಮನೆಗೆ ಸುಣ್ಣ ಬಣ್ಣ ಆಕಲ... ಅದೇ ಬಾಲನ ಕರ್ಕಂಡ್ ಬಾ... ಅಂತ ಹೇಳ್ಯಳೆ.

ಕಾವೇರಿ : ಅಯ್ಯೋ... ನೀವ್ಗೆ ಅದೆಲ್ಲ ಗೊತ್ತಾದುಲೆ. ಹಳೆ ಕಾಲದವರಂಗೆ ಮಾಡ್ರೆ. ಈಗ ಹೊಸ ಹೊಸ್ತೆಲ್ಲ ಬಂದುಟು. ಗೋಡೆಗೆಲ್ಲ ವಾಲ್‌ಶೀಟ್ ಬೇರೆ ಬೇರೆ ಡಿಸೈನ್‌ದ್ ಸಿಕ್ಕಿದೆ. ಬೆಂಗಳೂರಿಗೆ ಜನ ಕಳ್ಸಿ ತರ್ಸಿ.

ಮೇಯರ್ : ಅಯ್ಯೋ.. ನಾನು ಹಂಗೆ ನೆನ್ಸಿದೆ. ಆದರೆ ಈಗ ಅದ್ಕೆಲ್ಲ ಟೈಮ್ ಎಲ್ಯುಟ್ಟು. ಐ ಮೀನ್ ಸಾಯೇಬ್ರ್.. ನಾಳೆನೋ ನಾಡ್ದೋ ಎತ್ತಿ ಬುಟ್ಟವೆ. ಆಮೇಲೆ ಗಡಿಬಿಡಿ ಆದೆ. ಅಲ್ಲ...

ಕಾವೇರಿ : ಮನೆ ವಿಚಾರ ನಂಗೆ ಬುಡಿ, ಗುಡ್ಡಪ್ಪಾ... ನೀ ಎಂತ ನೋಡ್ದು. ನೀ ಹೊರ್ಡು. (ಮ್ಯೂಸಿಕ್‌ನ ಅಬ್ಬರ) ಚೆಕ್.... ಇವ್ಳು ಒಂದ್... (ಕೂಗಿ) ಯಾಗ ನೋಡ್ರೂ... ಮೊಬೈಲ್....ಇಲ್ಲಿ ಮಾತಾಡ್ದು ಕೇಳ್ದುಲೆ. ಒಮ್ಮೆ ನಿಲ್ಸ್ (ಮ್ಯೂಸಿಕ್ ನಿಲ್ಲುತ್ತದೆ)

ಮೇಯರ್ : ಫಟಿಂಗರ್, ಮೂರುಕಾಸುನವು... ಸುದ್ದಿ ಸಿಕ್ಕಿದ ಕೂಡ್ಲೆ ಹೊಟ್ಟೆ ಉರ್ಯಕೆ ಸುರು ಆದೆ. ಈ ವರ್ತಕರ್ ನನ್ನ ಮೇಲೆ ಚಾಡಿ ಹೇಳಿ ಹೋಗೊಳಲ್ಲ, ಸಾಹೇಬ್ರ ಎದ್ರ್. ಇವ್ಕೆ ಎಂತ ಮಾಡಿಕೆ ಆದೆ.. ನಾ ಯಾರ್‌ಅಂತ ತಿಳ್ಕೊಂಡೊಳೊ. ಗೊತ್ತಾದೆ... ನಾ ಯಾರೂಂತ ತೋರ್ಸಿನೆ ಇವ್ಕೆ. ಮೇಯರ್ ಮುತ್ತಣ್ಣ ಡೆಲ್ಲಿ ಸೆಂಟ್ರಲ್ ಗೌರ್ನಮೆಂಟ್ ದೊಡ್ಡ ಸಾಹೇಬ್ರ ಮಾವ. ಹ್ಣಂ....

ಕಾವೇರಿ : ಎಲ್ಲ ಗೊತ್ತುಟ್ಟು... ನಮ್ಮ ಎದುರ್ ಮಾತ್ರ ನಿಮ್ಮ ದೌಲತ್. ಅವು ಎದುರಿಗೆ ಬಂದರೆ....

ಮೇಯರ್ : ನೀ ಬಾಯ್ ಮುಚ್ಚು. ಲುಕ್ ಹಿಯರ್... ಬಾಯ್ ಮುಚ್ಚು.

(ಕಾವೇರಿ ಬಾಯಿ ಮುಚ್ಚುವಂತೆ ನಟಿಸುವಳು)

ಮೇಯರ್ : ಕಾನ್ಸ್‌ಟೇಬಲ್ ಕಡ್ಡಿಯಪ್ಪಾ... ಏ ಕಡ್ಡಿಯಪ್ಪಾ...

ಕಾನ್ಸ್‌ಟೇಬಲ್ : (ಪ್ರವೇಶಿಸುತ್ತಾನೆ) ಸರ್...

ಮೇಯರ್ : ಓಡು ಈಗಲೇ ಹೋಗಿ ಕರ್ಕಂಡ್ ಬಾ... ಅವರ ಶನಿ ಬುಡ್ಸಿನೆ.. ಚಾಡಿ... ಚಾಡಿ...

ಕಾನ್‌ಸ್ಟೇಬಲ್ : ಯಾರ ಸರ್

ಮೇಯರ್ : ಆ ವರ್ತಕರ

(ಕಾನ್ಸ್‌ಟೇಬಲ್ ಹೋಗ್ತಾನೆ)

ಮೇಯರ್ : ಏನಂತ ತಿಳ್ಕೊಂಡೋಳೋ ಈ ಫಟಿಂಗರ್.. ಈ ಮೇಯರ್ ಮುತ್ತಣ್ಣನ

ಟೌನ್‌ಲಿ ಇರೋಕುಂತೇಳ್ರಿ....

ಕಾವೇರಿ : ಅಯ್ಯೋ..... ನೀವು ಇನ್ನೂ ಈ ಮೇಯರ್‌ಗಿರಿಲೇ ಇರುವ ಯೋಚನೆಲೀ ಒಳರಿ.. ಈ ಕೂಂಪೆಲಿ

ಮೇಯರ್ : ಐ ಮೀನ್... ನಾವು ಮುಂದಕ್ಕೆ ಡೆಲ್ಲಿಗೆ ಹೋಗಿ ಇರೊಕಾದೋ ಏನೋ... ಅಲ್ಲ ಐ ಮೀನ್...

ಕಾವೇರಿ : ಅದುವೇ... ನೀವುಗೆ ಇನ್ನು ಹಳ್ಳಿ ಬುದ್ಧಿ...

ಮೇಯರ್ : ನೋ....ನೋ.... ಎಸ್.. ಐ ಮೀನ್ ವಿ ಷಲ್ ಗೋ ಟುಡೆಲ್ಲಿ. ವೀ ಆಲ್ ಗೋ ಟು ಡೆಲ್ಲಿ. ವಿ ಲೀವ್ ಇನ್ ಡೆಲ್ಲಿ. ಯಸ್...

ಕಾವೇರಿ : ಅಲ್ಲ... ಮತ್ತೆ ದೊಡ್ಡ ಸಾಹೇಬ್ರಿಗೆ ಮುತ್ತಿನಂಥ ಮಗಳ ಕೊಟ್ಟ್ ಅವು ಬುಟ್ಟವೇನಾ.... ಒತ್ತಾಯ ಮಾಡಿ ಕರ್ಕೊರ್ಂಡ್ ಹೋವ್ರೊ.... ಪಾಪ.... ಈ ಮೋನಿನ ಒಬ್ಬಳ್ನೇ ಕಳ್ಸುದಾದ್ರೂ ಹೇಂಗೆ.....

ಮೇಯರ್ : ಎಸ್ ಐ ಅಂಡರ್‌ಸ್ಟಾಂಡ್.. ಐ ಮೇ ಬಿಕಮ್ ಐ ಮೀನ್... ಸಮ್ ಹೈ ಪೋಸ್ಟ್... ವೇರಿ ಬಿಗ್ ಡಿಗ್ನಿಟರೀಸ್... ಮೇಬಿ ದ ಗವರ್ನರ್ ಆಫ್...ದ ಸ್ಟೇಟ್ ಆಫ್ ಡೆಲ್ಲಿ.

ಕಾವೇರಿ : ಅಯ್ಯ... ಶುರು ಆತಲ್ಲಪ್ಪ ಇವರ ಇಂಗ್ಲೀಷ್...

ಮೇಯರ್ : ಮತ್ತೆ ಡೆಲ್ಲಿಗೆ ಹೋದ ಮೇಲೆ ಅರೆಭಾಷೆ ಮಾತಾಡಿಕೆ ಆದೇನಾ... ಅಲ್ಲಿ ಎಲ್ಲ ಇಂಗ್ಲೀಷೇ.. ನೀನೂ ಇಂಪ್ರು ಮಾಡಿಕ...

ಹಿಂದಿನೂ ಕಲಿಯಕು (ಮೋನಿಕಾ ಪ್ರವೇಶ)

ಮೋನಿಕಾ : ಈ ಮಮ್ಮಿ ಹಿಂದಿ ಕಲ್ತ್‌ಆತ್....

ಕಾವೇರಿ : ಎಡೆಲಿ ಬಾತ್.... ಬಾಯಿ ಹಾಕಿಕೆ... ನಾ ನೋಡ್... ಹಿಂದಿ ಕಲ್ತ್ ನೋತ್ ಅವರಕಿಂತಲೂ ಲ್ಯಾಕ್ ನಿನ್ನೆದುರೇ ಮಾತಾಡಿ ತೋರ್ಸದಿದ್ದರೆ ಆಗ ಹೇಳ್.....

ಮೇಯರ್ : ಕಂ... ಕಂ.... ಮೋನಿ ಡಿಯರ್ ಹೌ ಲಕ್ಕಿ ಯೂ ಆರ್ ಮೈ ಸ್ವೀಟ್ ಗರ್ಲ್...

ಕಾವೇರಿ : ಹ್ಹಾಂ... ಬರೇ ಬಾಯಿಲೆ ಹೇಳ್ರೆ ಆತ್‌ಲೆ. ತುಂಬ ದೊಡ್ಡ ಮನ್ಸ.....ಅವ್ಳಿಗೆ ಕುತ್ತಿಗೆಗೆ ನಾಲ್ಕೆಳೆ ಸರ, ಎರಡುಜೊತೆ ಬಳೆ, ಡೈಮಂಡ್ ನೆಕ್ಲೇಸ್, ಉಂಗುರ....

ಮೇಯರ್ : ಹ್ಹಾಂ.... ಶೂರ್....ಶೂರ್.... ಮಾಡ್ನೊಮೊ...

ಕಾವೇರಿ : ಹ್ಹಾಂ.... ನಿಮ್ಮ ಕುರೆಬುದ್ಧಿ ಬುಟ್ಟ್‌ದ್ ಹಂಞ ಜಾಸ್ತಿ ಕೈ ಬಿಚ್ಚೋಕು. ಡೆಲ್ಲಿಲಿ ನಾವ್ಗೆ ಸರಿಯಾಗುವಂತ ಬಂಗ್ಲೆ ಒಂದ್ ನೋಡೊಕಾದ್... (ಹೊರಗಡೆ ಸದ್ದು. ವರ್ತಕರು ಬರುವುದನ್ನು ಕಂಡು ಮೋನಿಕಾ ಏನೋ ಗುನುಗಿಕೊಳ್ಳುತ್ತಾ ಕುಣಿಯುವ ನಡಿಗೆಯಲ್ಲಿ ನಿರ್ಗಮನ. ಕಾವೇರಿ ಹೊರಡುವಾಗ)

ಮೇಯರ್ : ನಿಲ್ಲ್‌ಯಾ... ನಿಲ್ಲ್ ತಾ.. ನೀನೇ ನೋಡು... ನಾ ಹೇಂಗೆ ಮಾತಾಡ್ನೇಂತ. (ಮೂವರ ಪ್ರವೇಶ)

ವರ್ತಕರು : (ಪ್ರವೇಶಿಸಿ) ನಮಸ್ಕಾರ ಮೇಯರ್ ಸಾಯೇಬ್ರಿಗೆ..

ಮೇಯರ್ : (ಗಡದ್ದಾಗಿ ಕುರ್ಚಿಯಲ್ಲಿ ಕುಳಿತಿದ್ದಾರೆ)

ಮೇಯರ್ : ಯಸ್....

ವರ್ತಕ 1 : ಬಾಕೆ ಹೇಳ್ದರಿಗಡ

ವರ್ತಕ 2 : ಬಂದ್ ಕಾಣೊಕೂಂತ.....

ವರ್ತಕ 3 : ಹಾಂಗೆ ನಾವೆಲ್ಲ ಬಂದದ್. ನಿಮ್ಮ ನೋಡಿಕೇಂತ...

ಮೇಯರ್ : (ಗತ್ತು) ಯಸ್.. (ಸ್ವಲ್ಪ ಹೊತ್ತು ಮೌನ)

ವರ್ತಕ 1 : (ಕಾವೇರಿಯನ್ನು ನೋಡಿ) ನಮಸ್ಕಾರ ಅಮ್ಮ..

ಇಬ್ಬರೂ : ಚೆನ್ನಾಗೊಳರಿಯಾ... ಅಮ್ಮ ... ಅಮ್ಮ ಎಲ್ಲ ಸೌಖ್ಯ ಅಲ್ಲ

ಮೇಯರ್ : ಲುಕ್ ಹಿಯರ್... ನೀವೆಲ್ಲ ನನ್ನ ಏನಂತ ತಿಳ್ಕೊಂಡ್ ಒಳರಿ.... ಯೂಸ್‌ಲೇಸ್ ಫೆಲೋ... ನನ್ನ ಮೇಲೆ ಚಾಡಿ ಹೇಳ್ಯಳರಿ ಅಲ್ಲ. ಹೌ ಡೇರ್.... ನನ್ನ ಮೇಲೆ ಚಾಡಿ.... ಅಲ್ಲ...

ವರ್ತಕ 1 : ಇಲ್ಲೇಪ್ಪ.. ಅಯ್ಯೋಯ್ಯೋ... ನಮ್ಮಂದ ಏನಾರ್ ತಪ್ಪಾಗಿದ್ದರೆ ಕ್ಷಮಿಸಿಬುಡಿ.

ವರ್ತಕ 2 : ಅಲ್ಲ... ಯಾಕೆ ನಮ್ಮ ಮೇಲೆ ಇಷ್ಟ್ ಕೋಪ..

ಮೇಯರ್ : (2ನೇ ವರ್ತಕನಿಗೆ) ಯಾಕೇ ಕೋಪ.. ನೀ ಕೊಟ್ಟೆ ಆ ಥರ್ಡ್‌ಕ್ಲಾಸ್ ಮರಕ್ಕೆ ಎ. ಕ್ಲಾಸ್ ಮರಂತ ಸರ್ಟಿಫಿಕೇಟ್ ಕೊಟ್ಟ್. ಅದ್

ಹೈಯೆಸ್ಟ್ ರೇಟ್‌ಗೆ ಸೇಲ್ ಆತ್ಲೆನಾ....

ವರ್ತಕ 2 : ಹೌದು ಸ್ವಾಮಿ.... ಕೊಟ್ಟತಲೇಂತ ಹೇಳ್ರೆ ನಂಗೆ ಮೆಟ್ಟ್ ತಕಂಡ್ ಹೊಡೆನಿ...

ವರ್ತಕ 1 : ಓಹ್.

ಮೇಯರ್ : ಓಹ್ ನಿನ್ನ ಅಂಗಡಿಗೆ, ಇಡೀ ಹಾಸ್ಟೆಲ್‌ಗೆ ಫುಡ್ ಸಪ್ಲೈ ಕಾಂಟ್ರಾಕ್ಟ್ ಕೊಡ್ಸಿದೆ. ಒಂದಕ್ಕೆ ಎರ್ಡ್ ಸೇರ್ಸಿ ಬಿಲ್ಲು ಮಾಡ್ದ... ಕುಂಬು ಅಕ್ಕಿ ಬೇಳೆ ಸಪ್ಲೈ ಮಾಡ್ದ. ನಾ ಸುಮ್ಮನೆ ಇತ್ಲೆನಾ.... ಗುಡ್ ಕ್ವಾಲಿಟೀಂತ ಸರ್ಟಿಫೈ ಮಾಡ್ತ್‌ಲೆನಾ... ಯೂಸ್‌ಲೆಸ್ ಫೆಲೋ... ದುಡ್ಡ್ ಹೊಡ್ದ್ ಇಡೀ ಊರ್‌ನ ಕುಟ್ಟೆ ತೆಗ್ದರಿ.. ಡಬ್ಬಲ್ ಡಬ್ಬಲ್ ದುಡ್ಡ್ ಮಾಡ್ದರಿ.... ಹಲ್ಕಟ್‌ಗ... ನನ್ನ ಮೇಲೆ ಚಾಡಿ ಅಲಾ... ಗುರ್ತ ಇಲ್ಲದ ಜಾತಿಗ...

ವರ್ತಕ 1 : ಅಲ್ಲ... ಅಲ್ಲ ಸಾರ್ ಏನೋ ಎಡವಟ್ ಆಗಿ ಹೋತ್. ನಮ್ಮಿಂದ ತಪ್ಪಾಗಿದ್ದಾರೆ. ಎರ್ಡ್ ಹೊಡೆನಿ... ಬೇಕರೆ ಎದೆಗೆ ಮೆಟ್ಟಿ.

ಮೇಯರ್ : ಲುಚ್ಛಾಂಗ... ನಾಮರ್ದಂಗ... ಸೆಂಟ್ರಲ್ ಸಾಯೇಬ್ರ ಹಕ್ಕಲೆ ಚಾಡಿ ಹೇಳ್ದರಿ ಅಲ್ಲ. ಅವು ಯಾರ್ ಗೊತ್ತಾಟ್ಟಾ. ಈ ಮನೆ ಆಳಿಯ ಆಗೋವು. ದಿ ಗ್ರೇಟ್ ಸೆಂಟ್ರಲ್ ಆಫೀಸರ್. ನನ್ನ ಆಳಿಯ ಹ್ಞಂ......

ವರ್ತಕ 1 : ತಪ್ಪಾತ್ ... ನಮ್ಮದ್ ಸರ್ವ ತಪ್ಪಾತ್....

ವರ್ತಕ 2 : ಏನೋ ತಪ್ಪಾಗಿರ್ದು. ನೀವು ಮೇಯರ್. ನಾವು ನಿಮ್ಮ ಮಕ್ಕ ಇದ್ದ ಹಾಂಗೆ. ಏನೋ

ಮಕ್ಕ ಹಾಸಿಗೆಲಿ ಹೇಸಿಗೆ ಮಾಡ್ರೆ....

ವರ್ತಕ 3 : ಆ... ಮಕ್ಕಳ ಕೊಲ್ಲಿಕೆ ಆದೆನಾ... ತಲೆಕಡೆಕೆ ಆದೆನಾ....

ಮೇಯರ್ : ಲುಕ್ ಹಿಯರ್

ವ್ಯಾಪಾರಿ : ದಯಮಾಡಿ ಕ್ಷಮಿಸಿ (ಗಟ್ಟಿಯಾಗಿ ಕಾಲು ಹಿಡಿಯುತ್ತಾರೆ. ಮೇಯರ್ ಗತ್ತಿನಿಂದ ಕಾವೇರಿ ಕಡೆಗೆ ನೋಡುತ್ತಾನೆ. ಆಕೆ ತಲೆದೂಗುತ್ತಾಳೆ)

ಮೇಯರ್ : (ಸಮಾಧಾನಗೊಂಡು) ಓ.ಕೆ... ಓ.ಕೆ.... ಲುಕ್ ಹಿಯರ್... ಆದ್ದ್ ಆತ್.. ಇನ್ನ್ ಮಾತ್ರ ಹಿಂಗೆಲ್ಲ ಆದರೆ ನಾ.. ಸುಮ್ಮಂಗಿರ್‌ಕಿಲೆ ... ನಿಮ್ಮ ಅಂಗ್ಡಿನ ಬಾಗಿಲ್ ಹಾಕ್ಸಿ ಊರ್‌ಂದ ಓಡ್ಸಿ ಕುಟ್ಟು.. ಏನಂತ ತಿಳ್ಕಂಡಳರಿ... ಡೋಂಟ್ ಥಿಂಕ್ ಐ ಯಾಮ್ ಜಸ್ಟ್ ಎ... ಮೇಯರ್ ಐ ಮೀನ್ ಐ...ಎಮ್

ವ್ಯಾಪಾರಿಗಳು : ಗೊತ್ತಾತ್... ಗೊತ್ತಾತ್....

ಮೇಯರ್ : ಸರಿ ... ನೀವು ಹೋಗಿ. ನಾನಾದಕ್ಕೆ ಬಚಾವ್ ಆದರಿ. ಹ್ಞಂ.. ಹೇಳ್ದಂಗೆ ನಮ್ಮ ಮಗಳ ಮದುವೆ ಉಟ್ಟು. ಸೆಂಟ್ರಲ್ ಸಾಯೇಬ್ರಿಗೆ ಕೊಟ್ಟ್. ಹ್ಞಾಂ... ಆ ಲೆವೆಲ್‌ಗೆ ಮದುವೆ ಆಕು.... ಗೊತ್ತಾತಲ್ಲ. ನೀವ್ಗೆಲ್ಲ ಜವಾಬ್ದಾರಿ ಉಟ್ಟು.

ವ್ಯಾಪಾರಿ 1 : ಆಯ್ಯೋ... ಅದೆಲ್ಲ ನೀವು ಹೇಳೋಕಾ... ನಮ್ಮ ಕರ್ತವ್ಯ...

ವ್ಯಾಪಾರಿ 2 : ಸಮಾರಂಭ ನಿಮ್ಮದ್ ಮಾತ್ರ ಅಲ್ಲ... ಅದ್ ಈ ಊರ್‌ನ ಕಾರ್ಯಕ್ರಮ.

ವ್ಯಾಪಾರಿ 3 : ಊರ್‌ನ ಮರ್ಯಾದೆನ ಪ್ರಶ್ನೆ.

ಮೇಯರ್ : ರೈಟ್. ಹೋಗಿ.. ಆಮೇಲೆ... ಗೊತ್ತುಟಲ (ವ್ಯಾಪಾರಿ ಹೋಗುತ್ತಾರೆ)

ಮೇಯರ್ : (ಹೆಂಡತಿಯೊಡನೆ) ಹೇಂಗೇ.... ಹೇಂಗಿತ್.. ಡಿಡ್ ಯು ಸೀ ಮಿ....

ಕಾವೇರಿ : ನೀವು ಭಯಂಕರ ಮಾರ್‍ರ್ರೆ.... ನೀವ್ಗೂ ಸೆಂಟರ್ ಆಫೀಸ್‌ರ್‍ಗತ್ತ್ ಬಾತಾ ಉಟ್ಟು... (ಮ್ಯಾಜಿಸ್ಟ್ರೇಟ್, ಎಜ್ಯುಕೇಶನ್ ಪ್ರವೇಶ)

ಎಜ್ಯುಕೇಶನ್ : ಅಯ್ಯೋ... ಅಯ್ಯೋ... ಅಯ್ಯೊ..... ಹೇಂಗೆ ಹೇಳ್ದೂಂತ ಗೊತ್ತಾದುಲೆ. ನಾವ್ಗೆಲ್ಲ ಎಷ್ಟ್ ಖುಷಿ ಆಗುಟು ಗೊತ್ತಾಟ್ಟಾ. ಸುದ್ದಿ ಕೇಳಿ ತಡೆಕೆ ಆತ್ಲೆ.

ಮ್ಯಾಜಿಸ್ಟ್ರೇಟ್ : ಮೇಯರ್ ಸಾಯೇಬ್ರೆ.... ಸತ್ಯ ಹೇಳ್ನೆ. ಇದ್ ನಿಮ್ಮ ಅದೃಷ್ಟ ಅಲ್ಲ. ಇಡೀ ಊರ್‌ನ ಅದೃಷ್ಟ.

ಕಾವೇರಿ : ಅಲ್ಲ ನೋಡಿ.... ನಾ ಸುಮ್ಮನೆ ಹೇಳ್ದುಂತ ಗ್ರಹಿಸ್‌ಬಡಿ... ಹಿಂದೆ ನಮ್ಮ ಮನೆತನಲಿ, ನಮ್ಮ ಅಜ್ಜನ ಕಾಲಲಿ ಆಗ ರಾಜರ್ ಇದ್ದೊದ್ಲಲ್ಲ.... ಚಾಮರಾಜ ಅರಸ್... ಅವು ಕುದುರೆ ಹತ್ತಿ ಸೀದಾ ನಮ್ಮ ಮನೆಗೆ ಬಂದಿದ್ದೊಗಡ. ಬಂದೊವೆ.... ಈ ಮನೆಲಿ ಒಂದ್ ಹೆಣ್ಣ್ ಕೂಸು ಹುಟ್ಟಿದೆ. ಅವ್ಳಿಗೆ ರಾಣಿ ಆಗುವ ಯೋಗ ಉಟ್ಟೊಂತ

ಹೇಳ್ದೋಗಡ.. ಹಾಂಗೇ.....

ಎಜ್ಯುಕೇಶನ್ : ಅಯ್ಯೋ.... ನಾವು ಕೇಳದ ಕಥೆನಾ. ಯಾರಿಗೆ ಈ ಐತಿಹ್ಯ ಗೊತ್ತಿಲ್ಲೆ ಹೇಳಿ. ನಿಮ್ಮದ್ ರಾಜವಂಶದ ರಕ್ತ ಅಲ್ಲ....

(ಆಗ ಇಂಜಿನಿಯರ್, ಡಾಕ್ಟರ್ ಪ್ರವೇಶ)

ಇಂಜಿನಿಯರ್ : ಸಾರ್... ನಾವು ಪ್ಲಾನ್ ಎಸ್ಟಿಮೆಟ್ ಎಲ್ಲ ಮಾಡುವೆ. ಮಾಸ್ಟರ್ ಪ್ಲಾನ್. ನೀವು ಹೆದ್ರ್‌ಬಡಿ. ಹ್ಞಾಂ.... ನೀವು ಸಂಬಂಧ ಸಾದ್‌ಸಿ ಬುಟ್ಟರಿ ಅಲ್ಲ....

ಡಾಕ್ಟರ್ : ..ಹ್ಞೆ..ಹ್ಞೆ... ಅದೇ ಅದೇ.....

(ಆಗ ಹರಿಕಥೆ ಶ್ಯಾಮಣ್ಣ. ಬ್ಯಾಂಕ್ ಮೇನೇಜರ್ ಕಿಣಿ ಪ್ರವೇಶ)

ಶ್ಯಾಮಣ್ಣ : ನಮೋ ನಮಾಯ... ನಮೋ ನಮಾಯಾ.... ಬುದ್ದಿಯವರಿಗೆ... ಅಮ್ಮಾ ಹೇಂಗೋಳರಿ...

ಕಾವೇರಿ : ಬನ್ನಿ ...ಬನ್ನಿ ಶ್ಯಾಮಣ್ಣ ಮ್ಯಾನೇಜರ್ ಬನ್ನಿ...

ಶ್ಯಾಮಣ : ಅಮ್ಮ.. ಕೇಳಿ ಆನಂದವಾಯಿತು. ಪರಮಾನಂದವಾಯ್ತು. ಶುಭ ಸಮಾಚಾರ. ಹಾಲ್ ಕುದ್ದಂಗೆ ಆತ್. ಆಗಲಿ, ಹೆಣ್ಣ್ ಮಕ್ಕಳ ಸೌಭಾಗ್ಯ.

ಕಿಣಿ : ನೀವು ಮಾಡ್ದ ಪೂರ್ವಜನ್ಮದ ಪುಣ್ಯದ ಫಲ. ಇಲ್ಲಿವರೆಗೆ ನೀವು ಸಾರ್ವಜನಿಕ ಸೇವೆ ಮಾಡ್ಡಕ್ಕೆ ದೇವರು... ದೇವರು ಬಂಪರ್ ಬೋನಸ್ ಮಂಜೂರು ಮಾಡ್ದೊ....

(ಬಾಚಯ್ಯ, ದೋಚಯ್ಯ, ಊರವರ ಪ್ರವೇಶ)

ಬಾಚಯ್ಯ : ಸಾರ್ ರೋಡ್ ಒಂದು ಕೂಡ್ಲೆ ರಿಪೇರಿ ಆಕು. ಬರೊವು ಹೋಗೊವೆಲ್ಲ...

ದೋಚಯ್ಯ : ಕೂಡ್ಲೆ ನಿಗಂಟ್ ಆಗಿಬುಟ್ಟರೆ ಮತ್ತೆ ತೊಂದರೆ ಆದು.

ಬಾಚಯ್ಯ : ಇಂಜಿನಿಯರ್‌ಗೆ ಹೇಳಿ ಬುಡಿ, ಊರ್ನ ನಡೂಲಿ ಕಸದ ರಾಶಿ ತುಂಬಿ ಹೋವ್ಬು ಅವು ಬಾಕನ ನಾತ... ನಾರಿಕೆ ಬೊತ್ತಲ

ಮೇಯರ್ : ಇಂಜಿನಿಯರ್.....

ಇಂಜಿನಿಯರ್ : ಅದೆಲ್ಲ ನಂಗೆ ಬುಡಿಸರ್.. ಈಗಲೇ ಕ್ಲೀನ್ ಮಾಡ್ಸಿಬುಟ್ಟನೆ..

(ಮೋನಿಕಾ ಕಾವೇರಿ ಪ್ರವೇಶ)

ಶ್ಯಾಮಣ್ಣ : ಆಹಾ... ಭಾಗ್ಯವಂತೆ, ಪುಣ್ಯವಂತೆ... ನೋಡಿಕೆ ಎರ್ಡ್ ಕಣ್ಣ್ ಸಾಲದ್. ಸ್ವಯಂವರಲಿ ಇಂದುಮತಿ ದೇವಿ ಇಳ್ದ್ ಬಂದ ಹಾಗೆ ಕಂಡದೆ. ಆಹಾ ಪರಮಾನಂದ... ಪರಮಾನಂದ...

ಕಾವೇರಿ : ಹೋಗ್ ಅವರ ಕಾಲ್ ಹಿಡ್ಕ.. ಆಶೀರ್ವಾದ ತಕ.

(ಎಲ್ಲರ ಕಾಲು ಹಿಡಿದು ಎಲ್ಲರೂ ಆಶೀರ್ವಾದ ಮಾಡ್ತಾರೆ)

ಶ್ಯಾಮಣ್ಣ : (ಮಂತ್ರ ಹೇಳುತ್ತಾರೆ) ಕಾಂತಾ ಕಾಂಚನ ಕಾಮಿನಿ ಕುವಲಯಕಾಮೋಪಚಾರಂಕೃತಂ. ಕಾಲಿಂದೀ ಕಮನೀಯ ಕಾಂಚನಪದಂ

ಕರ್ಪೂರ ಕಸ್ತೂರಿಕಾ
ಕಾವೇರೀಕರುಣಾನಿಧೆ ಕರತಲಂ ಕಂದರ್ಪ
ಕಂಜಾಸನಂ
ದಂಪತ್ಯೋಶ್ಚಿರಕಾಲ ಭೋಗಮತುಲಂ..
ಕುರ್ಯಾತ್ ಸದಾ... ಮಂಗಲ...
(ಆಗ ಓಡೋಡುತ್ತಾ ಪೋಸ್ಟ್ ಮಾಸ್ಟರ್ ಪ್ರವೇಶ)

ಪೋಸ್ಟ್‌ಮಾಸ್ಟರ್: ಓಯ್ ಇಲ್ಲಿ ಕೇಳ್ರಿ... ಒಂದು ಪತ್ರ ಒಂದು ಪತ್ರ.... ತಂದೀನ್ರಿ....
(ಎಲ್ಲರೂ ಆಶ್ಚರ್ಯ)

ಮೇಯರ್ : ಲುಕ್ ಹಿಯರ್... ಪೋಸ್ಟ್‌ಮಾಸ್ಟರ್....

ಪೋಸ್ಟ್‌ಮಾಸ್ಟರ್: ಹೂನ್ರಿ... ಮೇಯರ್ ಸಾಬ್... ಪತ್ರ ರಿ... ನಾನು ಇವತ್ತ್ ಚಾಪಾ ಹೊಡಿಲಿಕ್ಕೆ ಹತ್ತಿದ್ದೇನ್ರೆ... ಒಂದ್ ಪತ್ರ ಕಾಣಸ್ತು, ಇದೇ ಊರಿನಾಗ ಡಬ್ಬೀಗೆ ಹಾಕಿದ್ರಿ... ಮ್ಯಾಲಕ್ಕ, ನ್ಯೂಡೆಲ್ಲಿ ಅಂಬೋ ಅತ್ತಾ ಕಾಣಸ್ತ್ರೀ, ಅನುಮಾನ ಹುಟ್ಟಿ ಒಡೆದು ನೋಡಿದೆನ್ರಿ... ಅದೇ ಅಂವಾ.. ನಾವು ಸಾಹೇಬ ಅಂತ ತಿಳಕೊಂಡಿದ್ದೆವೆಲ್ರೀ.. ಅವನೇ ಬರೆದಿದ್ದು– ಅವನ ಡೆಲ್ಲಿಗೆಣೆಕಾರಂಗೆ... ಇದನಾಂಥವನೇ ಅಂವ ಇನ್ನೊಬ್ಬ ಅನ್ರಿ... ಅದರಾಗ ತಿಳೀತ್ರಿ, ಈ ಸಕ್ಸೇನಾ ಅಂಬೋವ ದೊಡ್ಡ ಸಾಹೇಬ ಅಂತ ತಿಳೀದಿದ್ದೆವಲ್ರಿ, ಅಲ್ರೀ... ಅಂವ ಸಾಹೇಬನೇ ಅಲ್ರೀ... ಜುಜುಬಿ ಒಬ್ಬ ಗುಮಾಸ್ತನಿ, ಗುಮಾಸ್ತ, ನಂಗೀತಾ ಕಮ್ಮಿ

ಪಗಾರ್ರಿ....

ಮೇಯರ್ : ಲುಕ್ ಹಿರಿಯರ್ ಮುಂಡುಗೋಡು.. ಯು ಆರ್ ಮ್ಯಾಡ್.

ಎಜುಕೇಶನ್ : ಈ ಪೋಸ್ಟ್‌ಮಾಸ್ತ್ರರಿಗೆ ಮಂಡೆ ಸಮ ಇಲ್ಲೆ.. ಓ.... ಗುಡ್ಡಪ್ಪಣ್ಣ ಇವುಕೆ ಒಂಚೂರು ತಣ್ಣೀರ್ ತಂದ್ ಕೊಡಿ.

ಪೋಸ್ಟ್‌ಮಾಸ್ಟರ್: ತಣ್ಣೀರು, ಗಿಣ್ಣೀರು ಏನ್ ಬ್ಯಾಡ್ರಿ... ಅ ಲಫಂಗ ತನ್ನ ಡೆಲ್ಲಿ ಗೆಣೆಗಾರಂಗೆ ಸ್ವತಃ ಬರೆದ ಪತ್ರ ರೀ... ಈ ಪತ್ರ ನೋಡ್ರಿ

ಮೇಯರ್ : ಹೌಡೇರ್ ಮಿ. ಮುಂಡುಗೋಡು. ನನ್ನೆದುರು ಈ ಮಾತ್ ಹೇಳಿಕೆ ಎಷ್ಟು ಧೈರ್ಯ ನೀವುಗೆ. ಅವು ಯಾರ್ ಗೊತ್ತುಟ್ಟಾ.. ನನ್ನ ಅಳಿಯ ಆಗೋವು..

ಪೋಸ್ಟ್‌ಮಾಸ್ಟರ್: ಅಯ್ಯೋ... ಸಾಬ್... ಅವ ಲಫಂಗ, ಬಿಕನಾಸಿ, ಬೇವರ್ಸಿ.... ಸಾಹೇಬ ಅಲ್ಲಾರಿ.. ಸಾಹೇಬ ಅಲ್ಲ.. ಹಂಗಂತ ನಾವು ಭ್ರಮಾ ಮಾಡಕೊಂಡೇವ್ರಿ... ಈ ಪತ್ರ ನೋಡ್ರಿ..

(ಓದುತ್ತಾ)

ಪ್ಯಾರೇ ಭಾಯಿ ಹರದಯಾಲ್ ಚಡ್ಡಾ – ಹಂಗಂದ್ರೇ ಅವರ ಸ್ನೇಹಿತರು ಇರಬೇಕ್ರಿ – ಇಸ್ ಶಹರ್ ಮೇ ಮುಝೆ ಬಹುತ್ ಅಜೀಬ್ ಎಕ್ಸ್‌ಪೀರಿಯನ್ಸ್ ಹೋ ರಹಾ ಹೈ. ಮುಝೇ ಲೋಗೋಂನೇ ಕೋಯಿ ಸಾಹೇಬ್ ಸಮಜ್‌ರಖಾ ಹೈ...

ಎಜುಕೇಶನ್ : ಅದರ ಅರ್ಥನೂ ಸ್ವಲ್ಪ ಬುಡ್ಸಿ ಹೇಳಿ...

ಪೋಸ್ಟ್‌ಮಾಸ್ಟರ್: ಹಂಗಂತಂದ್ರ, ಈ ಊರಿನಾಗ ನನ್ನ ಜನ ಸಾಹೇಬ ಅಂತ ತಿಳಕೊಂಬಿಟ್ಟಿದಾರೆ. ಎಂಥಾ ವಿಚಿತ್ರ ನೋಡು – ಅಂತ್ರಿ....

ಮ್ಯಾಜಿಸ್ಟ್ರೇಟ್ : ಗೋ..ಆನ್... ಗೋ..ಆನ್...ಕಂಟಿನ್ಯೂ..

ಪೋಸ್ಟ್‌ಮಾಸ್ಟರ್: ಮೈ ಮೇಯರ್ ಕೇ ಘರ್ ಮೇ ರೆಹ್‌ರಹಾಂ ಹುಂ. ಮುಝೇಯ ಹಾಂ ಬಹುತ್ ಅಚ್ಛಾ ಟ್ರೀಟ್‌ಮೆಂಟ್ ಮಿಲ್‌ರಹಾ ಹೈ... ಫೈವ್‌ಸ್ಟಾರ್ ಟ್ರೀಟ್‌ಮೆಂಟ್....

ಮೇಯರ್ : ಹ್ಹೆ...ಹ್ಹೆ..ಹ್ಹೆ.... ಅತಿಥಿ ಸತ್ಕಾರ...

ಪೋಸ್ಟ್‌ಮಾಸ್ಟರ್: ಬಟ್.... ದಿ ಮೇಯರ್ ಈಸ್ ಎ ರಿಯಲ್ ಬಾಸ್ಟರ್ಡ್...!

ಮೇಯರ್ : (ಆಶ್ಚರ್ಯ) ಆಂ?

ಪೋ.ಮಾ : ಬಾಸ್ಟರ್ಡ್....

ಮೇಯರ್ : ಎಂತ ಹೇಳ್ದ್ದ ನೀ....

ಪೋ.ಮಾ : ನಾನಲ್ರಿ ಹಂಗಂದದ್ದು..... ಹಾಂಗೆ ಇಲ್ಲಿ ಬರದದೆ ನೋಡ್ರಿ..

(ಮೇಯರ್ ಕುರ್ಚಿಯಲ್ಲಿ ಕುಸಿದು ಕೂರುತ್ತಾನೆ)

ಪೋ.ಮಾ: (ಮುಂದುವರಿಸಿ)ಯೇ ಮೇಯರ್ ಬಹುತ್ ಜಂಟ್ಲಮನ್ ದಿಖತಾ ಹೈ. ಲೇಕಿನ್ ಅಪನೇ ಸರ್‌ಕೆ ಜಗಹ್ ಗೋಬರ್ ಭರ್ ರಖಾ ಹೈ. ಅಂದ್ರೆ – ಶಗಣಿ, ಮೇಯರ್ ತಲೆಲಿ ಶೆಗಣೀ ಅಂತ...

ಮ್ಯಾಜಿಸ್ಟ್ರೇಟ್ : ಓದಿ.. ನಿಲ್ಸಬಡಿ..

ಪೋ.ಮಾ : ಆ್ಯಂಡ್ ದಿ ಮ್ಯಾಜಿಸ್ಟ್ರೇಟ್ ಹ್ಯಾಸ್ ನೋ

ಬ್ರೇನ್ ಇನ್ ಹಿಸ್ ಹೆಡ್. ಎಂಡ್ ಹಿ ಈಸ್ ಎ ವಂಡರ್‌ಫುಲ್ ಸ್ಪೆಸಿಮನ್ ಟು ಬಿ ಕೆಪ್ಟ್ ಇನ್ ಎ ಆಫ್ರಿಕನ್ ಝೂ....

ಮ್ಯಾಜಿಸ್ಟ್ರೇಟ್ : ನೋ...ನೋ..

ಎಜ್ಯುಕೇಶನ್ : ಹಂಗೆಂತೇಳಿ..ಅವ್ವೇನೂ ಕಟ್ಟಿ ಹೇಳ್ದ್ ಅಲ್ಲ... ಹಂಗೆ ಅಲ್ಲಿ ಬರ್ದ್ದೊಳೊ...ಅಕ್ಷರಲಿ

ಪೋ.ಮಾ : ಕೇಳಿ..ಕೇಳಿ ಎಜ್ಯುಕೇಶನ್ ಆಫೀಸರ್.. ಈಸ್ ಎ ಸಿಂಪಲ್ ಫೂಲ್, ಎ ಗ್ರೇಟ್‌ಕ್ಲೌನ್...

ಎಜ್ಯುಕೇಶನ್ : ಇಲ್ಲೆ.. ಇಲ್ಲೇ.... ಸಿಂಪಲ್‌ಂತ ಹೇಳ್ಯೋಳೊ... ಗ್ರೇಟ್‌ಂತ ಬರ್ದ್ದೊಳೊ...

ಇಂಜಿನಿಯರ್ : ಹ್ಹ...ಹ್ಹ... ಗ್ರೇಟ್..ಗ್ರೇಟ್..

ಪೋ.ಮಾ : ಇಲ್ಲೊಬ್ಬ ಇಂಜಿನಿಯರ್ ಇದ್ದಾನೆ. ಅವನು ಎಲ್ಲರ ಮೇಲೆ

ಇಂಜಿನಿಯರ್ : ಪ್ರೀತಿ...

ಪೋ.ಮಾ : ಎಲ್ಲರ ಮೇಲೆ ಚಾಡಿ ಹೇಳುವ ಗುಳ್ಳೆನರಿ.. (ಇಂಜಿನಿಯರ್ ಮುಖ ತಿರುಗಿಸಿ ನಿಲ್ಲುತ್ತಾನೆ)

ಡಾಕ್ಟರ್ : ಎಡಾ, ಪಿನ್ನೆ ಊದಾ... ಊದಾ...

ಪೋ.ಮಾ : ಆಂಡ್ ದಿ ಡಾಕ್ಟರ್ ಈಸ್ ಎ ಸ್ಕೇರ್‌ಕ್ರೋ... ಹಾಂಗಂದರೇನ್ರೀ.. ?

ಮ್ಯಾಜಿಸ್ಟ್ರೇಟ್ : ಹಂಗೆ ಹೇಳ್ರೆ ಈ ಗದ್ದೆಲಿ ನಿಲ್ಸುವೇ ಅಲ್ಲ... ಬೆರ್ಚಪ್ಪಾಂತ.. (ಡಾಕ್ಟರ್ ಏದುಸಿರು ಬಿಡುತ್ತಾನೆ)

ದೋಚಯ್ಯ : ಹೆ..ಹ್ಹೆ..ಹ್ಹೆ..

ಬಾಚಯ್ಯ : ಹೇ..ಹ್ಹೆ..ಹ್ಹೆ.. ನಿಂಗೆ ಬೇಕಿತ್ತಾ..

ಪೋ.ಮಾ : ಇಸ್ ಶಹರ್‌ಮೇಂ ಔರ್ ದೀ ಲೋಗ್ ಹೈಂ. ಬಾಚಯ್ಯ ಅಂಡ್ ದೋಚಯ್ಯಅಂದ್ರೆ ನೀವಿಬ್ರು.. ವೋ ತೋ ಗೋಬರ್ ಕೆ ಕೀಡೇ ಜೈಸೆ ಘೂಮ್‌ತೇ ರೆಹತೆ ಹೈಂ... ಅಂದ್ರೆ ಗೊಬ್ಬರದಲ್ಲಿ ಇರತ್ತಲ್ಲ, ಗೊಣ್ಣೆ ಹುಳು... (ಅವರಿಬ್ಬರು ಪೆಚ್ಚಾಗುತ್ತಾರೆ. ಎಲ್ಲರೂ ನಗುತ್ತಾರೆ) ಔರ್.... ಮುಂದೆ ನನ್ನ ಬಗ್ಗೆ ಅದೇನೋ ಬರೆದಿದೆ ಬಿಡಿ... ಸರೀ ಗೊತ್ತಾಗೊಲ್ಲ..

ಎಲ್ಲರೂ : ಓದಿ...ಓದಿ...

ಡಾಕ್ಟರ್ : ಏ...ಊದ...

ಪೋ.ಮಾ : ಅದೇನೂ ಬರೆದಿದೆ ಎಲ್‌ಒಒಎಸ್‌ಇ ಕ್ಯಾರೆಕ್ಟರ್

ಡಾಕ್ಟರ್ : ಲೂಸ್..ಕ್ಯಾರೆಕ್ಟರ್..
(ಎಲ್ಲರೂ ನಗುತ್ತಿರುವಾಗ ಮೇಯರ್ ಗಕ್ಕನೆ ಏಳುತ್ತಾನೆ)

ಮೇಯರ್ : ಲುಕ್ ಹಿಯರ್..... ನಂಗೆ ನಂಬಿಕೆ ಬಾದ್ಲೆ... ಆದರೆ ನಾ ಇದರ... ನಂಬುದುಲೆ... ಆದರೆ ನಂಬದಿರಿ ಕಾದುಲೆ... ನಾ ನಂಬದಿದ್ದರೂ ಸತ್ಯ ಸುಳ್ಳಾದುಲೆ... ಸತ್ಯ ಸುಳ್ಳಾದುಲೇ....
(ಗುಡ್ಡಪ್ಪ ಪ್ರವೇಶ)

ಗುಡ್ಡಪ್ಪ : ಸಾರ್.. ಬ್ಯಾಂಡ್‌ಸೆಟ್‌ನವು ಬಂದೊಳು. ಕ್ಲಾರಿಯೋನಟ್ ಆದೋ... ಸ್ಯಾಕ್ಸೋಫೋನ್ ಆದೋಂತ ಕೇಳ್ತಾ ಒಳೋ...? ಒಮ್ಮೆ ಬಾರ್ಸಿ ತೋರ್ಸುವೆಗಡ. ಒಳಗೆ ಕರೆಕಾ....

(ಮೇಯರ್ ಸ್ವಲ್ಪ ಹೊತ್ತು ಗಂಭೀರ. ನಂತರ)

ಮೇಯರ್ : ಕರಿ ಬ್ಯಾಂಡ್ ಸೆಟ್‌ನವರ ಕರಿ. ಮೈಕನೂ ಹಾಕ್ಸಿ. ಊರ್‌ನವರೆಲ್ಲ ಕರ್ಸಿ... ನನ್ನ ತಲೆ ಬೋಳ್ಸಿ ಸೆಗಣಿ ಮೆತ್ತಿ ಕತ್ತೆ ಮೇಲೆ ಊರೆಲ್ಲ ಮೆರವಣಿಗೆ ಮಾಡ್ಸಿ. ನನ್ನ ತಲೆ ಒಳಗೆ ಸೆಗಣಿ ಸೆಗಣಿ ತುಂಬಿಕಂಡ್ ಉಟ್ಟು... ನಾ ಹೆಬಗ... ಬೋದಾಳ, ಮೂರ್ಖ, ಶತಮೂರ್ಖ.. ನಾನೇ... ನಾನೇ... ಶತಮೂರ್ಖ.. ಊರೆಲ್ಲ ಕರ್ದ್ ಕರ್ದ್ ಹೇಳಿ ನೀವೆಲ್ಲವೂ.. ನೀವೆಲ್ಲ ಹೇಳಿಕಂಡ್ ಬನ್ನಿ... (ಕಾವೇರಿಗೆ) ಎಲ್ಲ.. ಆದ್ದ್ ನಿನ್ನಂದ. ಅವ ಏನೋ ಬೊಗಳ್ತ್. ನೀ ನನ್ನ ಕೆಬಿ ಕಚ್ಚಿದ. ಹಿಂದೆ ಮುಂದೆ ನೋಡದೆ.... ಈಗ ಸಂತೋಷ ಆತಾ. ಕುಣಿ.... ಕುಣಿ... ದಾರಿಲಿ ಹೋಗುವ ಬಿಕಾರಿ ಬೇವರ್ಸಿಗೆ ನನ್ನ ಮಗಳ ಧಾರೆ ಎರ್ದ್ದ್ ಕೊಡೊಕೂಂತ ಮಾಡ್ದಲ್ಲ. ನಿಂಗೆ ಡೆಲ್ಲಿಗೆ ಹೋಕಲ್ಲ... ಅಲ್ಲಿ ಬಂಗ್ಲೆ ಕಟ್ಟೊಕಲ್ಲ... ಆತಾ ಬಂಗ್ಲೆ ಆತಾ... ನೀವೆಲ ದಗಲ್‌ಬಾಜಿಗ... ಎಲ್ಲ ಸೇರಿ ನನ್ನ ಮಂಗ ಮಾಡ್ದರಿ... ಮೋಸ... ಥೂ... ಸ್ಕೌಂಡ್ರಲ್ಸ್.... ಹೋಗಿ ಚಾಡಿ ಹೇಳಿ... ನನ್ನ ಕಣ್ಣ್ ತಪ್ಪಿ ಲಂಚ ಕೊಟ್ಟರಿ... ಸಿಕ್ಕಿತಾ... ಶಾಂತಿ ಸಿಕ್ಕಿತಾ... ಸಂತೋಷ ಆತಾ... ಕುಣಿಯನಿ ಕುಣಿಯನಿ... ಕಳ್ಳರೇ,

ಘಟಿಂಗರೇ, ಲುಚ್ಚಾಗಳೇ... ಹೋಗಿ ಹಾಂ ನಾನೂ ಘಟಿಂಗ, ಲಫಂಗ, ಕಳ್ಳ, ಲುಚ್ಚಾ, ನಾನೂ ಘಟಿಂಗಾ... (ಕುಸಿದು ಕುಳಿತು ಇಡೀ ಮೌನ... ನಂತರ ಎದ್ದು ಪ್ರೇಕ್ಷಕರನ್ನು ನೋಡುತ್ತಾ ಸ್ವಗತ)

ಎಂತ... ನೀವು ನೆಗಾಡ್ತಾ ಒಳರಿಯಾ.... ಯಾರ ನೋಡಿ ನೆಗಾಡ್ತಾ ಒಳರಿ... ಆಸ್ಪತ್ರೆ ನಾ..ಕೋರ್ಟಾ... ಪೋಲೀಸ್ ಸ್ಟೇಶನ್‌ನ್ನಾ.... ಎಜ್ಯುಕೇಶನ್ ಡಿಪಾರ್ಟ್‌ಮೆಂಟ್.. ಇಂಜಿನಿಯರ್... ಪೋಸ್ಟ್ ಮಾಸ್ತ್ರ ಅಲ್ಲ ನಾನಾ.... ಮೇಯರ್‌ದ ಗ್ರೇಟ್ ಮೇಯರ್ ಮುತ್ತಾಣ್ಣಾ.....

ಯಾರ ನೋಡಿ ನೆಗಾಡ್ತಾ ಒಳರಿ... ಅಥವಾ ಈ ದೊಡ್ಡ ಕನ್ನಡಿಲಿ ನಿಮ್ಮದೇ ಪ್ರತಿಬಿಂಬ ನೋಡಿ ನೆಗಾಡ್ತಾ ಏಳರಿಯಾ....? ನೆಗಾಡಿ (ಸುಸ್ತಾಗಿ ನೆಲದ ಮೇಲೆ ಕುಸಿದು ಬೀಳುತ್ತಾನೆ. ರಂಗ ಮೇಲಿರುವವರು ಸ್ತಬ್ಧ ಚಿತ್ರಗಳಂತೆ ನಿಲ್ಲುತ್ತಾರೆ. ಹೊರಗೆ ಪೋಲೀಸ್ ಸೈರನ್ ಕೇಳಿಸುತ್ತದೆ. ಸೌಂಡ್ ನಿಂತಾಗ ಓರ್ವ ಪೋಲೀಸ್ ಅಧಿಕಾರಿ ಪ್ರವೇಶಿಸಿ ವಿದ್ಯುಕ್ತ ಆಜ್ಞೆಯನ್ನು ಓದುತ್ತಾನೆ..)

ಅಧಿಕಾರಿ : ಎ ಸೆಂಟ್ರಲ್ ಗವರ್ನ್‌ಮೆಂಟ್ ಆಫೀಸರ್ ಹ್ಯಾಸ್ ಎರೈವ್ಡ್ ಫ್ರಮ್ ಡೆಲ್ಲಿ. ಜಸ್ಟ್ ನೌ.. ಈ ಮನಿಸಿಪಲ್ ವ್ಯಾಪ್ತಿನ ಎಲ್ಲ ಸರಕಾರಿ ಕಚೇರಿಗಳ ತಪಾಸಣೆ ಮಾಡಿಕೇಂತ ಕೇಂದ್ರ

ಸರಕಾರದ ಉನ್ನತ ಅಧಿಕಾರಿ ಒಬ್ರೊರು ಈಗಷ್ಟೇ ನಗರಕ್ಕೆ ಬಂದೊಳೊ... ಈ ಮುನಸಿಪಲ್ ವ್ಯಾಪ್ತಿನ ಎಲ್ಲ ಅಧಿಕಾರಿಗ ಕೂಡ್ಲೇ ಮುಖ್ಯ ಕಚೇರಿಗೆ ಬಂದ್ ಅವರ ಕಾಣೊಕೂಂತ ಅವು ಆದೇಶ ಮಾಡ್ಯೊಳೊ....

(ಎಂದು ಓದಿ ನಿರ್ಗಮಿಸುತ್ತಾನೆ.)

**ಅಂತ್ಯ**





'ಸಾಹೇಬ್ರ್ ಬಂದವೇ' – ಈ ನಾಟಕನ ಅರೆಬಾಸೆಗೆ ಅನುವಾದ ಮಾಡ್ದೊವು ಜಯಪ್ರಕಾಶ್ ಕುಕ್ಕೇಟಿ ಅವು. ಇವು ಸುಳ್ಯ ತಾಲೂಕ್ ಮಂಡೆಕೋಲು ಗ್ರಾಮದ ಕುಕ್ಕೇಟಿ ರಾಮಣ್ಣ ಗೌಡ, ಶೇಷಮ್ಮ ದಂಪತಿಗಳ ಮಜ್ಜ. ಸಣ್ಣದರ್‌ಂದಲೇ ಸಾಹಿತ್ಯ, ಕತೆ, ಕವನ ಬರೆವ ಆಸಕ್ತಿ ಇದ್ದ ಇವು ಪದವಿ ಶಿಕ್ಷಣ ಮುಗ್ಸಿ 1985ರ್‌ಲಿ ಸುಳ್ಯದ ಪ್ರತಿಸ್ಟಿತ ಪತ್ರಿಕೆ 'ಸುದ್ದಿ ಬಿಡುಗಡೆ'ನ ವರದಿಗಾರ ಆಗಿ ಕೆಲ್ಸ ಸುರು ಮಾಡ್ದೊ. ಪತ್ರಕರ್ತ ಆಗಿ ಸುಮಾರ್ 37 ವರ್ಸಗಳ್‌ಂದ ಕೆಲ್ಸ ಮಾಡ್ತಾ ಇರ್‌ವ ಇವು ಈಗ ಮಂಗ್ಳೂರ್‌ನ 'ಹೊಸದಿಗಂತ' ಪತ್ರಿಕೆನ ಸುಳ್ಯ ವಲಯದ ವರದಿಗಾರ ಆಗಿ ಒಳೊ. ರಂಗಬೂಮಿಲಿ ಆಸಕ್ತಿ ಇರ್‌ವ ಇವು ಸುಳ್ಯದ 'ಅಭಿನಯ' ರಂಗ ಕೇಂದ್ರದ ಕಾರ್ಯದರ್ಶಿಯಾಗಿ, ಕಲಾಕೇಂದ್ರ 'ನಾದ ನೃತ್ಯ' ಸಂಸ್ತೆನ ಕಾರ್ಯದರ್ಶಿಯಾಗಿ, ಸುಳ್ಯದ ಸ್ವಂತಿಕಾ ಸಾಹಿತ್ಯ ಬಳಗದ ಅಧ್ಯಕ್ಷ ಅಗಿ, ಯುವಕ ಮಂಡಲದ ಕಾರ್ಯದರ್ಶಿ ಆಗಿ ಹತ್ತ್ ಹಲವು ಸಂಸ್ತೆಗಳ್ಲಿ ಕೆಲ್ಸ ಮಾಡ್ಯೊಳೊ.

ಯುವಜನ ಮೇಳಗಳ್ಲಿ ಕಲಾವಿದ ಆಗಿ, ಅಮೇಲೆ ತುಂಬ ವರ್ಸ ಯುವಜನ ಮೇಳಗಳ ತೀರ್ಪುಗಾರ ಆಗಿ ಸೇವೆಕೊಟ್ಟೊಳೊ. ನಾಲ್ಕ್ ಕನ್ನಡ ನಾಟಕ ರಚನೆ ಮಾಡಿ ಅದರ ನಿರ್ದೇಶನ ಮಾಡಿ ಪ್ರದರ್ಸನ ಕೊಟ್ಟೊಳೊ. ಏಳೆಂಟ್ ತುಳು ನಾಟಕಗಳ್‌ಲಿ ಅಭಿನಯ ಮಾಡ್ಯೊಳೊ.

ಪತ್ರಿಕೋದ್ಯಮ, ಸಾಹಿತ್ಯ, ರಂಗಬೂಮಿ ಹಿಂಗೆ ನಿರಂತರ ಸಕ್ರಿಯ ಆಗಿರುವ ಇವು ಬಾರೀ ಪೊರ್ಲುಲಿ 'ಸಾಹೇಬ್ರ್ ಬಂದವೇ' ನಾಟಕನ ಅರೆಬಾಸೆಗೆ ಅನುವಾದ ಮಾಡಿ ಕೊಟ್ಟೊಳೊ.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಮಡಿಕೇರಿ ರೂ. 100